# ಶೂದ್ರ

ಲೆ : ರೂ. 2



ಈ ಸಂಚಿಕೆಯಲ್ಲಿ :

ಕೆ. ವಿ. ತಿರುಮಲೇಶ್—ಸುಂದರರಾಜ್—ಗೌರೀಶ ಕಾಯ್ಕಿಣಿ—ಬಿ. ಸಿ. ಶೈಲ—ಸ. ರಘುನಾಥ್—ಡಾ॥ ಬಸವರಾಜ ಸಬರದ—ಬಿ. ಎಸ್. ಗಾಯತ್ರಿ—ಬಿ. ಸಿ. ರಾಮಚಂದ್ರಶರ್ಮ—ಆರ್. ವೆಂಕಟೇಶಮೂರ್ತಿ—ಕ. ವೆಂ. ರಾಜಗೋಪಾಲ್—ಡಾ॥ ಎಲ್. ಎ. ಸೂರ್ಯನಾರಾಯಣ—ಶಂಕರ ಕಟಗಿ—ಕೆ. ಜನಾರ್ಧನ ತುಂಗ—ಕನಸಿಗೊಂದು ಕಣ್ಣು.

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 5 ಫೆಬ್ರವರಿ 1986 ಸಂಪುಟ : 11

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ—ಆನಂದಮೂರ್ತಿ—ಮಹೇಶ್

ಮುಖಪುಟದ ಕಲಾವಿದರು : ದೇಶಪಾಂಡೆ

ಹಿಂಬದಿ ಪುಟದ ಕಲಾವಿದರು : ಕೆ. ಜಿ. ಸುಬ್ರಹ್ಮಣ್ಯಂ

ಕೆಲವು ತಾಂತ್ರಿಕ ತೊಂದರೆಗಳಿಂದ ಉಡುಪಿ ರಮೇಶ್‌ರಾವ್‌ರವರ ಚಿತ್ರಗಳನ್ನು ಬಳಸಲಾಗಲಿಲ್ಲ. ಮುಂದಿನ ಸಂಚಿಕೆಗೆ ಬಳಸಲಾಗುವುದು.

ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂದಾಕಳಿಸಿ. ಆಜೀವ ಸದಸ್ಯರಾಗಿ. ಲೇಖನವನ್ನು ಕಳಿಸುವಾಗ ಹದಿನೈದು ಪೈಸೆಯ ರಿಪ್ಲೈ ಕಾರ್ಡಿಡಿ. ಚಂದಾವನ್ನು ಚೆಕ್ ಮೂಲಕ ಕಳಿಸುವವರು ಎರಡು ರೂಪಾಯಿ ಹೆಚ್ಚುವರಿ ತುಂಬ ಬೇಕಾಗಿ ವಿನಂತಿ.

ವಾರ್ಷಿಕ ಚಂದಾ : 22 ರೂ.

ಆಜೀವ ಚಂದಾ : 250 ರೂ. (ಐದು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜು ಅಂಚೆ,
ಬೆಂಗಳೂರು–560 029

ಒಂದು ಸೂಚನೆ : ಶೂದ್ರ ಸಮಾಜವಾದಿ ನಾಯಕರಾಗಿದ್ದ ದಿ॥ ಶಾಂತವೇರಿ ಗೋಪಾಲಗೌಡರು ಹಾಗೂ ದಿ॥ ಎಸ್. ವೆಂಕಟರಾಂರವರ ನೆನಪಿನ ವೇದಿಕೆಯಿಂದ ಪ್ರತಿವರ್ಷ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲು ಬಯಸಿದೆ. ಒಟ್ಟು ಎರಡು ಬಹುಮಾನಗಳು. ತಲಾ ಮುನ್ನೂರು ರೂಪಾಯಿಯಂತೆ. ಪ್ರಬಂಧದ ವಿಷಯುಗಳು : 1) ಗಾಂಧೀ ನಂತರದ ಭಾರತಹ ರಾಜಕೀಯ 2) ಭಾರತದಲ್ಲಿ ಕಮ್ಯೂನಿಸ್ಟ್ ಚಳುವಳಿಯ ಸೋಲು ಗೆಲುವುಗಳು. ಪ್ರಬಂಧ ಕಳಿಸಲು ಕೊನೆಯ ದಿನಾಂಕ : ಏಪ್ರಿಲ್ ಒಂದು 1986. ಪುಟಗಳು ಪುಲ್‌ಸ್ಕೇಪ್‌ನಲ್ಲಿ 15 ರಿಂದ 20 ರೊಳಗಿರಬೇಕು, ಅಂಕಣ್ಣ, ಕಾವ್ಯ ಸ್ಪರ್ಧೆಗೆ ಕೊನೆಯ ದಿನಾಂಕ ಮಾರ್ಚ್ 10 ರಂದು ಪ್ರತಿಪದ್ಯಕ್ಕೆ 200 ರೂಪಾಯಿ ಸಂಭಾವನೆ.

ಸಂ.

# ತಿರುಮಲೇಶ್ ಜತೆ ಒಂದು ಸಂಜೆ

—ಕೆ. ಸುಂದರರಾಜ್

ಸುಂದರರಾಜ್ : ನನ್ನ ಮೊದಲ ಪ್ರಶ್ನೆ ಈಗ ಕ್ಲೀಷೆಯಾಗಿದೆ. ಅದು off asked ಕೂಡ. ಆದರೆ ಸದ್ಯದ ನಮ್ಮ ಎಡಬಿಡಂಗಿ ಸಾಹಿತ್ಯಕ ಸಂದರ್ಭದಲ್ಲಿ ಈ ಪ್ರಶ್ನೆಯನ್ನು ಪದೇ ಪದೇ ಕೇಳಬೇಕಾಗಿದೆ, ಚರ್ಚಿಸಬೇಕಾಗಿದೆ, ಚಿಂತಿಸಬೇಕಾಗಿದೆ. ಆದ್ದರಿಂದ ಕೇಳುತ್ತಿದ್ದೇವೆ ಸರ್. ಹೇಳಿ-ನೀವೇಕೆ ಬರೆಯುತ್ತೀರಿ ? ಬರೆಯದೇ ಇರುವುದು ಸದ್ಯದ ಸ್ಥಿತಿಯಲ್ಲಿ ಸುಖವಲ್ಲವೆ ?

ತಿರುಮಲೇಶ್ : ಒಳ್ಳೇದು, ನೋಡಿ ; ಭಾಷೆ ಮನುಷ್ಯನಿಗೆ ದತ್ತವಾದಂತಹ ಒಂದು ವಸ್ತು. ಈ ಭಾಷೆಯನ್ನು–ಒಂದು, ನಾವು ದಿನನಿತ್ಯದ ಬಳಕೆಯಲ್ಲಿ ಉಪ

---

ಡಾ॥ ಕೆ.ವಿ. ತಿರುಮಲೇಶ್ ನಮ್ಮ ಮುಖ್ಯ ಕವಿಗಳಲ್ಲಿ ಒಬ್ಬರು. ಹೈದರಾಬಾದಿನ ಇಂಗ್ಲೀಷ್ ಭಾಷಾ ಸಂಸ್ಥಾನದಲ್ಲಿ ರೀಡರ್ ಆಗಿರುವ ಇವರನ್ನು ನಾನು ಇವರ ಸಂಶೋಧಕ-ವಿದ್ಯಾರ್ಥಿಯಾಗಿ ಹತ್ತಿರದಿಂದ ನೋಡುವ ಅವಕಾಶ ಹೊಂದಿದ್ದೆ. ಬೆಳಿಗ್ಗೆ ಒಂಬತ್ತರಿಂದ ಸಂಜೆ ಐದೂವರೆಯವರೆಗೆ ತಮ್ಮ ರೂಮಿನಲ್ಲಿಯೇ ಕೂತು, ಹುಡುಗರಿಗೆ ಪಾಠ ಹೇಳಿಕೊಡುತ್ತಲೋ, ಸಾಹಿತ್ಯ, ರಾಜಕೀಯಗಳನ್ನು ತಮ್ಮದೇ ವಿಶಿಷ್ಟ ಶೈಲಿಯಲ್ಲಿ ಚಿಂತಿಸುತ್ತಲೋ, ಅದರ ಸೂಕ್ಷ್ಮಗಳನ್ನು ತಮ್ಮ ಸಹೋದ್ಯೋಗಿಗಳಲ್ಲಿ ನನ್ನಂತಹ ಸಂಶೋಧಕ-ವಿದ್ಯಾರ್ಥಿಗಳಲ್ಲಿ ಹಂಚಿಕೊಳ್ಳುತ್ತಲೋ ಇರುವ ಇವರನ್ನು ನೋಡಿದಾಗ ಬೆರಗಾದೆ.

ಹೈದರಾಬಾದಿನ ಫೆಬ್ರುವರಿಯ ಒಂದು ಸಂಜೆ, ನನ್ನ ಹಾಸ್ಟೆಲ್ ರೂಮಿನಲ್ಲಿ, ತಿರುಮಲೇಶರನ್ನು "ಮಾತನಾಡಿಸಿದ್ದ"ರ ಹಲವು ಭಾಗಗಳು ಇಲ್ಲಿವೆ. ಸಂದರ್ಶನದ ಮಾದರಿಯಲ್ಲಿ ಇವರೊಡನೆ ಚರ್ಚಿಸಿದ ಸುಮಾರು ಮೂರು ಗಂಟೆಗಳ ಪೂರ್ಣ ಪಾಠವನ್ನು ಇಲ್ಲಿ ಕೊಡುವುದು ಅಸಾಧ್ಯ. ಅವರು ಸಾಹಿತ್ಯವನ್ನು ಕುರಿತಂತೆ ಹೇಳಿದ ಮಾತುಗಳಷ್ಟೇ ಇಲ್ಲಿ ದಾಖಲಿಸಿದ್ದೇನೆ. ಇವರನ್ನು ಹೀಗೆ ಸಂದರ್ಶಿಸುವಾಗ ನನ್ನ ಗೆಳೆಯ ಹಾಗೂ ಯುವಕವಿ ಶ್ರೀ ಬಿದಿರಹಳ್ಳಿ ನರಸಿಂಹಮೂರ್ತಿ ಕೂಡ ಇದ್ದರು. ಅವರೂ ಒಂದೆರಡು ಪ್ರಶ್ನೆಗಳನ್ನು ಕೇಳಿ, ಅಂದಿನ ಚರ್ಚೆಗೆ ಸತ್ವ ಕೊಟ್ಟರು.

---

ಕೆ. ಸುಂದರರಾಜ್, 617, ಪೈಪ್‌ಲೇನ್ ರಸ್ತೆ, ಶ್ರೀನಗರ, ಬೆಂಗಳೂರು–560 050.

ಯೋಗಿಸ್ತೀವೆ. ಅದು ಬರೀ ಒಂದು Communication Levelನಲ್ಲಿರ್ತದೆ. ಇನ್ನೊಂದು, ಈ ಭಾಷೆ ನಮ್ಮ ಒಳಗಿಂದನ್ನ ಏನನ್ನೋ ಹೇಳ್ತದೆ. ಇನ್ನೊಬ್ಬನಲ್ಲಿ ಏನಿವೆ ಅಂತ ತಿಳಿಯೋದು-ಕಂಡುಕೊಳ್ಳೋದು. ಒಬ್ಬ ವ್ಯಕ್ತಿಯನ್ನ, ಒಂದು ಸಮಾಜವನ್ನು ತಲುಪೋದು. ಈ levelನ ಭಾಷೆ ಸಾಹಿತ್ಯದ್ದಾಗುತ್ತೆ. ಆ ಹಂತದಲ್ಲಿ ಭಾಷೆಯನ್ನ ಉಪಯೋಗಿಸ್‌ಬೇಕಾದ್ರೆ ಸಾಹಿತ್ಯದಲ್ಲಿ ಏನಾದರೂ ಮಾಡ್ಬೇಕಾಗುತ್ತೆ-ಕವಿತೆ ಬರೀಬೇಕಾಗತ್ತೆ, ಕಾದಂಬರಿ ಬರೀಬೇಕಾಗತ್ತೆ.

ಸು : ಆದ್ರೂನು ಬರಿಯದೆ ಇರೋದು ಸುಖ ಅಲ್ಲವೇ ? ಮಾತನಾಡೋದೇ ಸುಲಭ ಹಾಗೂ ಅಗತ್ಯ ಕೂಡ. ಹಾಗೆ ನೋಡಿದರೆ ನೀವು ನಿಜವಾಗಿಯೂ ತಲುಪಬೇಕಾಗಿರೋಂತಹ ಜನಗಳು ಯಾರು ? ನಿಮ್ಮ ಪ್ರಕಾರ ಬರಿಯೋದು ಯಾರೋ ಬೇರೆಯವರನ್ನ ತಲುಪೋಕ್ಕೆ. ಅಂದರೆ ಯಾರೋ ಬೇರೆಯವರನ್ನ ತಲುಪಬೇಕು. ಅಂದರೆ ದಿವಸಾ ನಾವು ಭೇಟಿ ಮಾಡೋ ಜನರನ್ನ ಮೀರಿ ಇನ್ಯಾರನ್ನೋ ತಲುಪಬೇಕಾಗುತ್ತೆ.

ತಿರು : ಆ ತಲುಪುವುದರಲ್ಲೇ ನನ್ನ ಜೀವನದ ಸಾರ್ಥಕ ಇದೆ. ಒಂದು fulfilment ಅಂತ ಏನು ಹೇಳ್ತಿರಾ ಅದು ಅಲ್ಲಿ ದೊರಕತ್ತೆ, ನೋಡಿ; ವಿಜ್ಞಾನಿಗಳೇನ್ ಮಾಡ್ತಾರೆ : ಜ್ಞಾನವನ್ನ ಹೆಚ್ಚಿಸೋದಕ್ಕೆ ನೋಡ್ತಾರೆ. ಅದರಲ್ಲಿ ವಿಜ್ಞಾನಿಯ Life fulfilment ಆಗತದೆ. ಅದೇ ರೀತಿ, ನಾನು ಕವಿಯಾಗಿ ಸಾಹಿತ್ಯ ಕೃಷಿ ಮಾಡ್ಕೊಂಡ್ರೆ, ಆ ತಲುಪುವದರಲ್ಲೇ ಒಂದು ರೀತಿಯ fulfilment ಸಿಗತದೆ. ಇದರಲ್ಲಿ ಕಷ್ಟ ಸುಖದ ಪ್ರಶ್ನೆಯೇ ಇಲ್ಲ. ಇನ್ನು ಬರೀದೇ ಇರೋದರಿಂದ ಸುಖ ಸಿಗುತ್ತೆ ಅನ್ನೋದೂ ನಿಜವೇ. ಆದರೆ ಅದು ಸೋಮಾರಿತನದ ಸುಖ. ಸೋಮಾರಿಯನ್ನ ನೀವು ಸುಖಿ ಎನ್ನುವುದಾದರೆ, ಆ ಸುಖ ನನಗೆ ಬರೀದೆ ಇರೋದರಿಂದ ಸಿಗತದೆ. ...ಹೀಗೆ ಬರೀದೆ ಇರುವ/ಏನೂ ಮಾಡದೆ ಇರುವ ಸುಖ ಸಾಹಿತ್ಯಕ್ಕೆ ಮಾತ್ರ ಮೀಸಲಲ್ಲ, ನೋಡಿ. ಅದು ವಿಜ್ಞಾನ ಆಗಲಿ, ಇನ್ನು ಯಾವ ಕೆಲಸವೇ ಆಗಲಿ, ಮನಸ್ಸಿಗೆ ಹಾಗೂ ದೇಹಕ್ಕೆ ದಣಿವನ್ನ ಕೊಡುವ ಯಾವುದೇ ಕೆಲಸ ಆದರೂ ಕಷ್ಟ. ಆದ್ರೆ ಅದೇ ರೀತಿಯಲ್ಲಿ ಅದು ಒಂದು ಮಾನಸಿಕ ತೃಪ್ತಿಯನ್ನ ಕೊಡುವಂತದ್ದು ಎನ್ನುವುದನ್ನ ಮರೀಬಾರದು ಅಲ್ಲವೆ ?

ಸು : ಬರೆಯೋದು ಯಾಕೆ ಅಂದ್ರೆ Communicate ಮಾಡಕ್ಕೆ ಅಂತದ್ರಿ. ನಮ್ಮ ಒಳಗಿನ ನೋವು, ಸಂಕಟ, ಖುಷಿ ಇಂತಹದು ಇನ್ನೇನೇನೋ ಬೇರೆಯವರಿಗೆ ತಲುಪಬೇಕು ಅಂತಾ. ಅದರಿಂದ ಒಂದು fulfilment ಸಿಗತದೆ ಅಂತಾನೂ ಹೇಳಿದ್ರಿ. ಇದಕ್ಕಿಂತಾ ಬೇರೇನೂ ಇಲ್ಲ ಅಂತೀರಾ ?

ತಿರು : Communicate ಮಾಡೋದು ಅಂದರೇನು ? ಏನನ್ನು ಸಂಹವನ ಮಾಡ್ಬೇಕು ? ಏನಾದ್ರೂ ಇರಲೇಬೇಕಲ್ಲ ? ಸಾಹಿತ್ಯದ ಕೆಲಸ ಒಂದು ಸೃಷ್ಟಿಯ ಕೆಲಸ. ಅಲ್ಲಿ ನಿಮಗೆ ಮೊದಲೇ ಏನೂ ಸಿಕ್ಕಿರೊಲ್ಲ. ಎಲ್ಲವನ್ನೂ ನೀವು create ಮಾಡಿರ್ತೀರ. ಅಂದರೆ ಒಂದು ಅರ್ಥದಲ್ಲಿ ಎಲ್ಲ creation ಕೂಡ ಒಂದು limitation ನಿಂದ ಸಾಧ್ಯ ಇದೆ. ಅಷ್ಟೇ ನಮ್ಮ ಜಗತ್ತಿನ limitation ತೆಗೊಂಡೇ create ಮಾಡೋದು, ಸೃಷ್ಟಿಸೋದು. ಆದರೆ ಸೃಷ್ಟಿಸೋದು ಅಂತೂ ನಿಜ. ನೀವು ಇಲ್ಲದ್ದರಿಂದ ಏನನ್ನೊ "ಉಂಟು" ಮಾಡ್ತಿರ ಅಲ್ಲವೇ ? ಅಂದರೆ ಆ ಮಟ್ಟಿಕ್ಕೆ ಅದು ಕೂಡ ಒಂದು ಕೊಡುಗೆ—ಒಂದು contribution. ಎಲ್ಲ ಕಲೆಯ ವಿಧಾನಗಳೂ ಸೃಷ್ಟಿಯ ಒಂದು ಕ್ರಿಯೆಯೇ. ಒಂದು ಕವಿತೆ ಆಗಲೀ, ಶಿಲ್ಪ ಆಗಲೀ, ಅಲ್ಲಿ ಇರದಲ್ಲಿ ಇನ್ನೇನನ್ನೋ ನಿರ್ಮಿಸಿದ ಹಾಗೆ...

ಸು : ನಾನು ಕೇಳಿದ್ದು ಇದಕ್ಕಿಂತ ಮೀರಿದ್ದು. ನಿಮ್ಮ ಮನಸ್ಸಿನಲ್ಲಿತ್ತೇ ಬರೆಯೋ ಕ್ರಿಯೆ ನಡೆದಾಗ, ಈ ಸೃಷ್ಟಿಕಾರ್ಯ ಮೀರಿ Beyond communicating something....the zeal to communicate....

ತಿರು : ನನ್ನ ಆರಂಭದ ಕವಿತೆಗಳಲ್ಲಿ ನಾನು ಕವಿತೆ ಬರೆಯೋದರ ಮೂಲಕ ನನ್ನ ಓದುಗರ ಮನಸ್ಸನ್ನು ನಾನು ನಿರ್ದೇಶಿಸುತ್ತೇನೆ ಏನಾದರೂ ಅದರಲ್ಲಿ ಹೊಸ ತೊಂದು ಅಲೆಯನ್ನು ಎಬ್ಬಿಸ್ತೇನೆ ಎನ್ನುವ ಒಂದು ಖಂಡಿತವಾದ ಒಂದು ವಿಚಾರ ಇತ್ತು. ಆದರೆ ಈಗ ಆ ಖಂಡಿತವಾದ ಒಂದು ವಿಚಾರ ನನ್ನಲ್ಲಿಲ್ಲ. ಈಗ ನಾನು ಇನ್ನಷ್ಟು humble ಆಗಿದ್ದೇನೆ. ಬರೀತಾ ಹೋದಂತೆ ಹೆಚ್ಚು ಹೆಚ್ಚು humble ಆಗಬೇಕಾಗುತ್ತೆ. ಆದ್ದರಿಂದ ನನಗೆ ಅರವತ್ತರ ದಶಕದಲ್ಲಿ ಇದ್ದಂತಹ ಒಂದು ದಾಷ್ಟ್ಯ ನನ್ನಲ್ಲೀಗ ಇಲ್ಲ. ನಾನು ಈಗ ನಿಮ್ಮ ಎದುರು ಅಥವಾ ಯಾವುದೋ audience ಎದುರು ಕವಿತೆ ಓದೋದನ್ನ ಬಹಳ humble ಆಗಿ ಮಾಡ್ತೇನೆ. "ನೋಡಿ, ನನಗೆ ಹೀಗೆ ಅನ್ನಿಸ್ತಾ ಇದೆ. ನಾನು ಇಂತಹ ದನ್ನು ಹೇಳತೀನಿ, ನೀವು ದಯವಿಟ್ಟು ಕೇಳತೀರಾ ? ಅನ್ನುವ ಧಾಟಿಯಲ್ಲಿ.

ಸು : ಅಂದರೆ ನಿಮಗೆ ಹಿಂದೆ ಇದ್ದಷ್ಟು, urgency—ತುರ್ತು ಈಗಿಲ್ಲ ಎಂದು ಅರ್ಥವೇ ? "ನಾನು ಹೇಳುವುದನ್ನು ನೀವು ಈಗ ಕೇಳಲೇಬೇಕು, ಇದು ಮುಖ್ಯ ವಾದದ್ದು, ನಾನು ಹೇಳಲೇಬೇಕಾಗಿದೆ" ಅನ್ನುವ urgency ನಿಮಗಿಲ್ಲವೇ ?

ತಿರು : ನೋಡಿ, ಸುಂದರರಾಜ್ - ಅದು ಹಾಗಲ್ಲ ಈಗಿರೋ ನನ್ನ ಸ್ಥಿತಿ ಒಂದು mellowed ಆದಂತಹದ್ದು. ಆದರೆ ಆ ಹಿಂದಿನ passion ನನಗೆ ಈಗಲೂ

ಇದೆ. ಅದನ್ನ ಕಳ್ಕೊಂಡ್ರೆ ಕವಿ ಬರಿಯೋಕೆ ಸಾಧ್ಯವಿಲ್ಲ. passion ಬಹಳ ಮುಖ್ಯ. ಅದಿಲ್ಲದಿದ್ದರೆ ನೀವೇನು ಕ್ರಿಯೇಟ್ ಮಾಡ್ತಿರಾ ಹೇಳಿ?

ಸು : ಈಗ ಸ್ವಲ್ಪ ವಿವರವಾಗಿ ಹೇಳಿ; ನೀವು ಹೇಗೆ ಬರೀತೀರಿ... the very process of writing a poem ಹೇಗಾಗ್ತದೆ? ಪದ್ಯ ಹೇಗೆ ಹೊಸದಾಗಿ ಸೃಷ್ಟಿಯಾಗ್ತದೆ?

ತಿರು : ಈ ಪ್ರಶ್ನೆಗೆ ಉತ್ತರ ಕವಿಯಿಂದ ಕವಿಗೆ ಬೇರೆಯಾಗ್ತದೆ. ಹಲವು ರೀತಿಗಳಿಂದ ಪದ್ಯ "ಉಂಟಾ"ಗಲು ಸಾಧ್ಯವಾಗುತ್ತೆ. ಎಲಿಯಟ್ ಹೇಳೋದು ನಿಮಗೆ ಗೊತ್ತಿಲ್ಲ. ಒಂದು ಅಡಿಗೆಯ ಪರಿಮಳದಿಂದ ಕೂಡ ನಿಮಗೆ ಪ್ರಚೋದನೆ ಉಂಟಾಗೋಕೆ ಸಾಧ್ಯ ಅಂತ. ಈ ಸೃಷ್ಟಿಕ್ರಿಯೆ ಹೇಗಾಗತ್ತೆ ಅಂತ ಹೇಳೋದು ಬಹಳ ವಿಚಿತ್ರವಾದ ಸಂಗತಿ. ಈಗ ಒಂದು ಉದಾಹರಣೆ ಕೊಡೋದಾದರೆ: ಒಮ್ಮೆ ನಾನು ಮತ್ತು ಸರ್ವಮಂಗಳ ಮೈಸೂರಲ್ಲಿ ಒಂದು ವಾಕ್ ಹೊರಟಿದ್ದೆವು. ಆಗ ನಾನು ಅವರನ್ನು ಕೇಳಿದೆ-"ಏನ್ ಬರೀತಿದೀರ" ಅಂತ. ಅವರು ಹೇಳಿದ್ರು; "ಏನ್ ಬರೆಯೋದು ಅಂತ ಹೊಳಿತಾನೇ ಇಲ್ಲ" ಅಂತ. ನಾನು ಹೇಳಿದೆ "ನೀವು ಈಗಲೇ ಯಾಕೆ ಒಂದು ಕವಿತೆ ಬರೆಯಬಾರದು" ಅಂತ. ಹಾಗೆ ನಾನು ಅವರಿಗೆ ಸೂಚಿಸುತ್ತಿರುವಂತೆ ನನಗೆ ಒಂದು ಸಾಲು ಫಕ್ಕನೆ ಹೊಳೆಯಿತು-"ನನ್ನ ಮೇರೆಯುನ್ನು ನಾನು ತಲುಪುವುದಿದೆ; ನಿದ್ರಿಸದೆ ಎಷ್ಟೋ ವರ್ಷಗಳಾದುವು; ಈ ಸಾಲುಗಳಿಗೆ ಪೂರಕವಾಗಿ ಒಂದು ಪದ್ಯ ಹುಟ್ಟಿಕೊಂಡದ್ದು ಒಂದೆರಡು ವರ್ಷಗಳನಂತರವೇ! -ಹಾಗೆ ಅಷ್ಟು ಕಾಲವೂ ನನ್ನ ಮನಸ್ಸಿನಲ್ಲಿ ಇದ್ದುಕೊಂಡು ಕೋಳಿ ಕಾವು ಕೊಡುವ ಹಾಗೆ-ಇಡೀ ರೂಪಕ್ಕಾಗಿ ಕಾಯ್ದುಕೊಂಡು ಹೊರಬಂದಿತು. ನಂತರದ ಒಂದು ಪದ್ಯದಲ್ಲಿ, ಹಾಗೆಯೇ ಏನೋ ಒಂದು ಪದ, ಇನ್ನೇನೋ ಒಂದು ವಸ್ತು ನಿಮ್ಮ ಮನಸ್ಸಿನಲ್ಲಿರಬಹುದು-ಬಹಳ ಕಾಲ. ಬರೆಯುವಾಗ ಅದು ಫಕ್ಕನೆ ಮೇಲೆ ಬರುತ್ತೆ. ಅದಲ್ಲದೇ ನಾನು ಬೇಗನೇ ಬರೆದ ಪದ್ಯಗಳೂ ಇವೆ. ಕೆಲವೊಮ್ಮೆ ಇನ್ನೊಬ್ಬರ ಸಾಹಿತ್ಯವನ್ನು ಓದಿದಾದ ಮೇಲೆ ಬರೆಯಲು ತೊಡಗುತ್ತೇನೆ. ಅಥವ ಕನ್ನಡದಲ್ಲಿ ನನ್ನ ಕಾಂಟೆಂಪೊರರಿಗಳು ಬರೆದ ಪದ್ಯಗಳನ್ನೇ ಓದಿರ್‌ತೀನಿ. ನಾನು ನನ್ನ younger poetsಇಂದ ಕೂಡ ಪ್ರಭಾವಿತನಾಗ್ತೀನಿ ಅಂತ. ಅಂದರೆ ಮನಸ್ಸಿನ ಯಾವುದೋ ಮೂಲೆಯಲ್ಲಿ ಒಂದು ಎಳೆ ಕಟ್ಟಿರ್‌ತದೆ. ಮತ್ತೆ ಅದು ತಕ್ಷಣ ದಲ್ಲಿಯೋ, ಅಥವಾ ಯಾವಾಗಲಾದರೋ ಪದ್ಯವನ್ನ ಬರೆಸಿಬಿಡುತ್ತದೆ. ಆಗ ಪದ್ಯ ಉಂಟಾಗ್ತದೆ.

ಸು : ಈಗ ಹೇಳಿ, ಸಾರ್. ಸಾಹಿತ್ಯದ ವಿದ್ಯಾರ್ಥಿಯಾಗಿದ್ದ ನೀವು ಭಾಷಾಶಾಸ್ತ್ರದ ಕಡೆ ಬಂದದ್ದು ಹೇಗೆ?

ತಿರು : ನಾನು ನಿಮಗೆ ಹಿಂದೆ ಹೇಳಿದ್ದೆ. ಮತ್ತೆ ಹೇಳ್ತೀನೆ. ಸಾಹಿತ್ಯ ವಿದ್ಯಾರ್ಥಿಯಾಗಿದ್ದ ನನಗೆ chomskyಯ ವಿಚಾರಗಳು ಆಕರ್ಷಿಸಿದವು. ಅವನೇನ್ ಹೇಳ್ತಾನೆ :- ಭಾಷೆ ಅನ್ನೋದು ಮನುಷ್ಯನ ಸ್ವಾತಂತ್ರಕ್ಕೆ ಸಂಬಂಧಿಸಿದ್ದು. ಭಾಷೆಯಲ್ಲಿ ನೀವು ಕಾಣುವಂತ ಆಯ್ಕೆ ಇದೆಯಲ್ಲ - ನೀವು ಒಂದು ವಾಕ್ಯ ರಚಿಸ್ತೀರಿ. ಅದರಿಂದ ಇನ್ನೊಂದು ವಾಕ್ಯ ರಚಿಸ್ತೀರಿ – ಹೀಗೆ ವಾಕ್ಯ ರಚನೆ ಅನ್ನೋದು ನಿಮ್ಮ freewillಗೆ ಸಂಬಂಧಿಸಿದಂತಹದು. ಈ ಥರದ ಸ್ವಾತಂತ್ರ್ಯ ಪ್ರವೃತ್ತಿ ಮನುಷ್ಯನಿಗೆ ಮೂಲಭೂತವಾದಂತಹದ್ದು. ಭಾಷೆ ಹೇಗೆ ಮೂಲಭೂತವಾದದ್ದೋ ಹಾಗೆಯೇ ಈ ಸ್ವಾತಂತ್ರ್ಯ ಪ್ರವೃತ್ತಿ ಕೂಡ ಮೂಲಭೂತವಾದದ್ದು.

ಸು : ನೀವು ಭಾಷಾಶಾಸ್ತ್ರವನ್ನ ನಿಮ್ಮ ಕಾವ್ಯದಲ್ಲಿ ಬಳಸಿದ ಬಗೆ....?

ತಿರು : ನೇರವಾಗಿ ಭಾಷಾಶಾಸ್ತ್ರ ನನಗೆ ಸಾಹಿತ್ಯ ರಚನೆಯಲ್ಲಿ ಸಹಾಯಮಾಡಲಿಲ್ಲ ಎನ್ನುವುದು ನಿಜ. ಆದರೆ ನೋಡಿ, ಭಾಷೆ ಎನ್ನುವುದು ಎಷ್ಟೊಂದು ವಿಚಿತ್ರವಾದ ಸಂಗತಿ ! ಎಷ್ಟೊಂದು ಸಂಕೀರ್ಣವಾದ ವಿಷಯ ! ಅದರ ಸಾಧ್ಯತೆಗಳು, ಅಸಾಧ್ಯತೆಗಳು ಎಲ್ಲವನ್ನೂ ತೀವ್ರವಾಗಿ ಅನುಭವಿಸುತ್ತಲೇ ನಾನು ಸಾಹಿತ್ಯ ರಚನೆಯಲ್ಲಿ ತೊಡಗಿದ್ದು. ಇನ್ನು ಪ್ರತ್ಯಕ್ಷವಾಗಿ ನನ್ನ ಕಾವ್ಯದ ಮೇಲೆ ಪ್ರಭಾವ ಬೀರಿದೆ ಎಂದು ಹೇಳಲಾರೆ.

ಸು : ಪರೋಕ್ಷವಾಗಿಯೇ ಆಗಿರಬಹುದಲ್ಲ ! ರಾಮಾನುಜನ್ ತಮ್ಮ ಭಾಷಾಶಾಸ್ತ್ರದ ಜ್ಞಾನವನ್ನ ತಮ್ಮ ಕವಿತೆಗಳಲ್ಲಿ ಅಳವಡಿಸಿಕೊಂಡ ಬಗೆಯನ್ನ ನೀವುಭಾಷಾಶಾಸ್ತ್ರಜ್ಞ ಎರಡೂ ಆಗಿ ಹೇಗೆ ನೋಡುತ್ತೀರಾ ?

ತಿರು : ಹೌದು ರಾಮಾನುಜನ್ ಕವಿ ಹಾಗೂ ಭಾಷಾಶಾಸ್ತ್ರಜ್ಞ. ಅವರು ಅವರ ಕವಿತೆಗಳಲ್ಲಿ ಸಾಲುಗಳನ್ನು ವಿಂಗಡಿಸುವಾಗ ಪದಗಳಿಗೆ ಬೇರೆ ಬೇರೆ ಅರ್ಥ ಬರುವ ಹಾಗೆ ಪ್ರಯೋಗಗಳನ್ನು ನಡೆಸ್ತಾರೆ. ಅಡಿಗರು ಭಾಷಾಶಾಸ್ತ್ರ ಓದಿಲ್ಲದಿದ್ದರೂ, ಕೆಲವೊಮ್ಮೆ ಇಂತಹ ಪ್ರಯೋಗಗಳನ್ನು ಮಾಡ್ತಾರೆ. ನಮ್ಮ ಹಳೆಯ ಹಲವು ಕವಿಗಳು ಕೂಡ ಇದನ್ನೇ ಮಾಡಿದ್ದಾರೆ. ಲಕ್ಷ್ಮೀಶ ಇಂತಹದನ್ನ ಮಾಡಿದ್ದಾನೆ. ಆದರೆ ನನಗ್ಯಾಕೋ ಅಂತಹ ಪ್ರಯೋಗಗಳಲ್ಲಿ ಇಷ್ಟವಿಲ್ಲ. ಅಂದರೆ, ನನಗೆ ಹೇಳಬೇಕಾದಂತಹ ಒಂದು ವಸ್ತು ಅಥವಾ ಓದುಗನಲ್ಲಿ ನಾನು ಉಂಟುಮಾಡಬೇಕಾದ ಒಂದು ಮನಸ್ಥಿತಿಯನ್ನು ಒಂದು ಸಣ್ಣ ಪದ, ಸಾಲುಗಳಿಂದ distract ಮಾಡುವಂಥಹದು ನನಗೇಸೂ ಹಿಡಿಸುವುದಿಲ್ಲ. of course, ಅದು distraction ಅಲ್ಲದೆ, ಪದ್ಯದ ಒಟ್ಟು ಅರ್ಥಕ್ಕೆ ಪೂರಕವಾಗಿದೆ ಎಂದರೆ ಅದು ಬೇರೆಯದೇ ಮಾತು. ಆದರೆ ನನಗೆ ಅಂಥಹ ಪ್ರಯೋಗಗಳೆಲ್ಲ distractionಗಳು ಎಂದೇ

ಅನಿಸಿದೆ. ಪದಗಳನ್ನು ಒಡೆಯೋದು, ಅದರಿಂದ effect ಬರಿಸೋದರ ಟ್ಗೆ
ನನಗೆ ಅಷ್ಟಾಗಿ ಆಸ್ಥೆ ಇಲ್ಲ.

ಸು : ನೀವು ಭಾವನಾತ್ಮಕವಾಗಿ ಕನ್ನಡಿಗರೇ ಆದರೂ, ಹುಟ್ಟಿದ್ದು ಬೆಳೆದಿದ್ದು ಎಲ್ಲಾ ಕೇರಳದಲ್ಲಿ. ಓದಿದ್ದೂ ಕೇರಳದಲ್ಲೇ. ನಂತರ ಇಲ್ಲಿ CIEFLನಲ್ಲಿ ಬಂದು ಅಧ್ಯಾಪನ ಮಾಡ್ತ ಇದೀರ. ನಾನು ನಿಮಗೆ ಹಿಂದೇನೇ ಹೇಳಿದ ಹಾಗೆ, ಇದು ಒಂದು ಕೇಂಬ್ರಿಡ್ಜೊ. ಆಕ್ಸ್‌ಫರ್ಡೋ ಎನ್ನುವ ಭ್ರಮೆ ಹುಟ್ಟಿಸುವ ಒಂದು ದ್ವೀಪ. ಇಲ್ಲಿ ಇಂಗ್ಲೀಷೇ ಎಲ್ಲದಕ್ಕೂ ಪ್ರಧಾನವಾಗಿ ಬಳಸುವ ಭಾಷೆ. ಇಂತಹ ಸನ್ನಿವೇಶದಲ್ಲಿ ನೀವು ಕನ್ನಡದಲ್ಲಿ ಬರೆಯುವುದು ಒಂದು ಚಾಲೆಂಜೋ, ವಿಪರ್‍ಯಾಸವೋ, ಏನೋ ಸ್ವಲ್ಪ ಹೇಳಿ.

ತಿರು : ಇದು ಒಂದು ರೀತಿಯಲ್ಲಿ ಚಾಲೆಂಜೇ. ಯಾಕೆಂದರೆ ನಾನು ಕನ್ನಡದ ಆಡು ಮಾತಿನಿಂದ ಬಹಳ ದೂರದಲ್ಲಿ ಇದ್ದೇನೆ. ನಿಮ್ಮಂಥಹವರನ್ನು ಭೇಟಿ ಮಾಡಿದಾಗ ಮಾತ್ರ ಕನ್ನಡದಲ್ಲಿ ಮಾತನಾಡುವುದು. ನಾನು ಮನೆಯಲ್ಲಿ ಕನ್ನಡ ಮಾತಾಡ್ತೇನೆ ನಿಜ. ಆದರೆ ಅದು ಒಂದು ಉಪಭಾಷೆ. standard kannada ಅಲ್ಲ ಅದು. ಕರ್ನಾಟಕದಲ್ಲಿ ನಾನು ಒಂದು ವರ್ಷವಷ್ಟೆ ಕೆಲಸ ಮಾಡಿರಬೇಕು-ಉಜಿರೆಯಲ್ಲಿ. ಬಾಕಿ ಎಲ್ಲಾ ಕಾಲ ಕರ್ನಾಟಕದಿಂದ ಹೊರಗಡೆಯೇ ಇದ್ದಾಯಿತು. ಹೀಗಾದುದರಿಂದ, ಅನಾನುಕೂಲದ ಜತೆಗೆ, ಒಂದು ರೀತಿಯಲ್ಲಿ ಅನುಕೂಲವೇ ಆಗಿದೆ. ಹೆಚ್ಚು ಜನರನ್ನ ಕಂಡಿದ್ದೇನೆ. ಹೆಚ್ಚು ಭಾಷೆಗಳನ್ನ ತಿಳ್ಕೊಂಡಿದ್ದೇನೆ. ಹಾಗೆಯೇ ಅನುಭವವನ್ನೂ ಹೆಚ್ಚಿಸಿಕೊಂಡಿದ್ದೀನಿ. ನೋಡಿ ಉದಾಹರಣೆಗೆ, "ಮುಖಾಮುಖಿ" ಪದ್ಯಗಳು "ಮಹಾಪ್ರಸ್ಥಾನ" ಬರೆದಾದ ಮೇಲೆ ಬರೆದದ್ದು. ಅದೂ ಹೈದರಾಬಾದಿಗೆ ಬಂದ ಮೇಲೆ. ಅದರಲ್ಲಿರುವ ವ್ಯತ್ಯಾಸ ವಿಭಿನ್ನ ಪರಿಸರದಿಂದ ಬಂದವಾದ್ದರಿಂದ, ವಿಭಿನ್ನ ಅನುಭವದಿಂದ ಬಂದವಾದ್ದರಿಂದ, ಅದು ಮಹತ್ವದ್ದಾಯಿತು ಎನುವುದು. ಇದು ನನ್ನ ಅನಿಸಿಕೆ.

ಸು : ಆದರೆ ನೀವು ಹೊರಗೆಯೇ ಇರಬೇಕಾದ್ದರಿಂದ, ಕರ್ನಾಟಕದಲ್ಲಿ ಆಗುವ ಕನ್ನಡ ಚಳುವಳಿಗಳು, ರಾಜಕೀಯ ಘರ್ಷಣೆಗಳಿಂದ ದೂರವಾದ ಹಾಗೆಯೇ ಆಯಿತಲ್ಲವೇ. ನೀವು ಮುಖಾಮುಖಿಯಾಗಿ ಕನ್ನಡದ ಹಲವಾರು ಸಂದರ್ಭಗಳಲ್ಲಿ ಪಾಲುಗೊಳ್ಳುವುದಕ್ಕೆ ಸಾಧ್ಯವೇ ಆಗಿಲ್ಲ. ಅದು ನಿಮಗೆ ಕನ್ನಡದ ಸೃಜನಶೀಲ ವ್ಯಕ್ತಿಯಾಗಿ ಒಂದು disadvantage ಅಲ್ಲವೇ ?

ಶಿ೦ : ಖಂಡಿತವಾಗಿಯೂ, ನಾನು ಇವತ್ತು ಕೂಡ ಕರ್ನಾಟಕದಲ್ಲಿ - ಬೆಂಗಳೂರೋ ಮೈಸೂರೋ ಇಂತಹ ಸ್ಥಳಗಳಲ್ಲಿಯಾದರೂ-ಇದ್ದರೆ ಚೆನ್ನಾಗಿತ್ತು ಎಂದೆನಿಸುತ್ತದೆ. ಕರ್ನಾಟಕದ ರಾಜಕೀಯದಲ್ಲಿ, ಕರ್ನಾಟಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ, ಅಲ್ಲಿ ಏನೇ ನಡೆದರೂ ನಾನಲ್ಲಿರಬೇಕಿತ್ತು ಎಂದೆನಿಸುತ್ತದೆ. ಆದರೆ ನೋಡಿ, ಜೀವನ ನಡೆಯಬೇಕಲ್ಲ.

ಸ : ಹಾಗೆ ನೋಡಿದರೆ, ಕನ್ನಡದ ಬಗ್ಗೆ ನೀವೇನು romantic ಅಲ್ಲವಲ್ಲ. ಇತ್ತೀಚೆಗೆ ರಾಮಾನುಜನ್ ಕರ್ನಾಟಕಕ್ಕೆ ಬಂದಾಗ ಬಹಳ romantic ಆಗಿ, ಅಲ್ಲಿರುವ ಜನಗಳು, ಹೋಟೆಲುಗಳು, ಸಿನಿಮಾ ಇವನ್ನೆಲ್ಲಾ ಕಂಡರಂತೆ. ಅಂತಹ nostalgia ಅನ್ನಬಹುದಾದ ಭಾವನೆ ನಿಮಗೆ ಕರ್ನಾಟಕದ ಬಗ್ಗೆ ಇದೆ ಅಂತ ನನಗನಿಸೋದಿಲ್ಲ.

ಶಿ೦ : ರಾಮಾನುಜನ್‌ಗೆ ಹಾಗೆ ಅನ್ನಿಸುವುದು ಸಹಜ. ಏಕೆಂದರೆ ಅವರು ಅಮೆರಿಕದಲ್ಲಿದ್ದಾರೆ. ನೀವು ಹೇಳಿದ ಹಾಗೆ ಅಲ್ಲಿ ಅವರಿಗೆ ಕೊತ್ತಂಬರಿಸೊಪ್ಪು ಕೂಡ nostalgia ಉಂಟುಮಾಡ್ತದೆ. ಆದರೆ ನನ್ನ ಬಗ್ಗೆ ಹೇಳೋದಾದರೆ, ಹೈದರಾಬಾದೇನು ಕರ್ನಾಟಕಕ್ಕಿಂತ ವಿಭಿನ್ನವಾಗಿದೆ ಅಂತ ಅನಿಸಲ್ಲ. ಭಾಷೆ ಮಾತ್ರ ವ್ಯತ್ಯಾಸ ಅಷ್ಟೆ.... ಜೀವನದ ರೀತಿ ನೀತಿಗಳು, ಸಮಾಜದ ಗತಿಸ್ಥಿತಿಗಳು ಎಲ್ಲಾ ಹೆಚ್ಚು ಕಡಿಮೆ ಎರಡರಲ್ಲೂ ಒಂದೇ....ಹಾಗೆಯೇ ನಾನು ಈ ವಾಸ್ತವತೆ ಮತ್ತು ತಾತ್ವಿಕತೆಗಳ ನಡುವೆ ಒಂದು ರೀತಿಯಲ್ಲಿ ಒದ್ದಾಡುವವ. ಅಂದರೆ ಕಣ್ಣಿಗೆ ಕಾಣುವುದೇ ವಾಸ್ತವ ಎಂದು ನಾನು ತಿಳಿದಿಲ್ಲ. ಕಣ್ಣಿಗೆ ಕಾಣಿಸದೆ ಇರುವುದು ಕೂಡ ನಮಗೆ ಗೊತ್ತಿರದ ವಾಸ್ತವಗಳು ಎಂದು ನನ್ನ ಅಭಿಪ್ರಾಯ. ಇಂಗ್ಲೀಷ್‌ನಲ್ಲಿ ಎಂಪೆರಿಸಿಸಮ್ ಎಂದು ಯಾವುದನ್ನ ಕರೀತಿರ, ಇದೆಲ್ಲ empiricist ಅಲ್ಲ. ಕಣ್ಣಿಗೆ ಕಾಣುವುದಷ್ಟೇ ವಾಸ್ತವತೆಯಲ್ಲ. ಕೆಪ್ಲರ್ ಹೇಳೋದೂ ಇದನ್ನೆ. ವಿಜ್ಞಾನಿ ಏನು ಮಾಡ್ತಾನೆ?- ಕಣ್ಣಿಗೆ ಕಾಣೋದರಿಂದ ಆಚೆ ಏನು ಅನ್ನುವ ಪ್ರಶ್ನೆ ಕೇಳ್ತಾನೆ. ಕವಿ ಕೂಡ ಇದನ್ನೇ ಮಾಡ್ತಾನೆ. ಕಣ್ಣಿಗೆ ಕಾಣೋದರ ಒಂದೆ ಏನಿದೆ ಅಂತ ನೋಡ್ತಾನೆ. ಈಗ ಒಬ್ಬನ ದುಃಖ ಕಣ್ಣಿಗೆ ಕಾಣಲ್ಲ. ನಾನು ಬಹಳ ವರ್ಷದ ಹಿಂದೆ ಒಂದು ಕಥೆ ಬರೆದಿದ್ದೆ. "ಅನ್ವೇಷಣೆ-ರೂಮು" ಅಂತ. ನೀವೂ ಓದೀದರ-ಅದನ್ನ. ಅದರಲ್ಲಿ ಒಬ್ಬ ಹೊಟೇಲಿನಲ್ಲಿ ರೂಮ್ ಮಾಡಿಕೊಂಡಿರತಾನೆ. ಸೆಕೆಂಡ್‌ಷೋ ಸಿನಿಮಾಗೆ ಒಂದು ದಿನ ಹೋಗ್ತಾನೆ. ಬರುವಾಗ ಎಲ್ಲ ಮುಚ್ಚಿರತದೆ. ಕತ್ತಲೆಯಾಗಿರತದೆ. ಆಗ ಅವನಿಗೆ ತನ್ನ ರೂಮನ್ನ ಹುಡುಕೋಕ್ಕೆ ಆಗುವುದೇ ಇಲ್ಲ. ಅವನು ತನ್ನ ರೂಮನ್ನ ಹುಡುಕ್ತಾ ಇದ್ದಾಗ, ಮತ್ತೊಂದು ರೂಮಿನಲ್ಲಿ ಬೆಳಕು ಕಾಣತದೆ. ಅಲ್ಲಿ

ಅವನು ಹೋಗಿ ಬಾಗಿಲು ತಟ್ಟಿ ಬಿಡ್ತಾನೆ. ಅದರೊಳಗಿನ ಒಂದು ವ್ಯಕ್ತಿ, ಅವನ ತಲೆ ಬೋಳಾಗಿರುತ್ತೆ, ಹೊರಗೆ ಬರುತ್ತಾನೆ. ಇವನೇನೋ ಪ್ರಶ್ನೆ ಕೇಳ್ತಾನೆ - ರೂಮಿನ ಬಗ್ಗೆ. ಅವನು ಮಾತನಾಡದೆಯೇ ಬಾಗಿಲು ಹಾಕ್ಕೊಂಡ್ ಬಿಡ್ತಾನೆ. ನಂತರ ಈತ ಕೆಳಗೆ ಬಂದು ಲೌಂಜಿನಲ್ಲಿ ನಿದ್ದೆ ಮಾಡ್ಬೇಕಾಗತ್ತೆ. ಬೆಳಿಗ್ಗೆ ಅವನಿಗೆ ಎಚ್ಚರಾದಾಗ ಅಲ್ಲೊಂದು ದೊಡ್ಡ ಗಲಾಟೆ ನಡೀತಾ ಇರತ್ತೆ. ಏನೆಂದರೆ ಅಲ್ಲೊಂದು ಆತ್ಮಹತ್ಯೆ ಆಗಿರ್‌ತದೆ. ಈತ ನೋಡುತ್ತಾನೆ : ತಾನು ಹಿಂದಿನ ರಾತ್ರಿ ನೋಡಿದ ಬೋಳು ವ್ಯಕ್ತಿಯೇ ಆತ್ಮಹತ್ಯೆ ಮಾಡಿಕೊಂಡಿರ್‌ತಾನೆ. ಆಗ ಈತನ ಮನಸ್ಸಿನಲ್ಲಿ ಅನ್ನಿಸತ್ತೆ :-"ನನಗೆ ಇದನ್ನ ತಪ್ಪಿಸಲು ಸಾಧ್ಯವಿತ್ತಾ" ಅಂತ. ಆದರೆ ಬೋಳು ವ್ಯಕ್ತಿಯ ಮನಸ್ಸಿನಲ್ಲಿ ಏನಾಗಿದೆ ಅಂತ ತಿಳಿದಿದ್ದರೆ ತಾನೆ ಆ ಆತ್ಮಹತ್ಯೆಯನ್ನು ತಪ್ಪಿಸಲು ಸಾಧ್ಯವಾಗಬಹುದಾದ್ದು. ಹೀಗೆ ಮನಸ್ಸಿನ ದುಃಖ ನಮಗೆ ಹೊರಗೆ ಗೊತ್ತಾಗಲ್ಲ. ಕವಿ ಮತ್ತು ವಿಜ್ಞಾನಿ ಒಂದರ್ಥದಲ್ಲಿ ನಮಗೆ ಕಣ್ಣಿಗೆ ಕಾಣದ್ದಕ್ಕಿಂತ ಆಚೆ ಏನಿದೆ ಅನ್ನೋದನ್ನ ಅನ್ವೇಷಿಸೋಕ್ಕೆ ತೊಡಗಿರ್ತಾರೆ. ಈ ಅರ್ಥದಲ್ಲೇ ನಾನು ವಾಸ್ತವತೇನ ಗ್ರಹಿಸೋದು It is not an empirical reality. ನೀವು ಅದನ್ನ rationalist reality ಅನ್ನಬಹುದೇನೋ !

ಷು : ಇನ್ನು ಕಾವ್ಯದ ಕೆಲವು ಮೂಲಭೂತ ಸಮಸ್ಯೆಗಳ ಬಗ್ಗೆ ಮಾತನಾಡೋಣ. "ಕಾಮ"ದ ಮೂಲಕ ಶೋಧನೆ ನಡೆಸೋಕೆ ಹೊರಟ ನವ್ಯರಲ್ಲಿ ನೀವೂ ಒಬ್ಬರು. ಉದಾಹರಣೆಗೆ, ನಿಮ್ಮ "ಕೇರಳ", "ನಾಸಿಯಾ", "ಕೇರಳದ ಹುಡುಗಿಯರು", ಮುಂತಾದ ಪದ್ಯಗಳನ್ನೇ ತೆಗೆದುಕೊಳ್ಳಬಹುದು. of course. ಇವೆಲ್ಲಾ ಲಕ್ಷ್ಮಣರಾವ್ ಪದ್ಯಗಳಷ್ಟು ರೋಚಕವಾದ, blatant exposition of sex ಅಲ್ಲದಿರಬಹುದು. But your primary concern was also the same. ಈಗ ನಾನು ಸ್ವಲ್ಪ polemical ಆಗೇ ಮಾತನಾಡತೀನಿ. ಯಾಕೆಂದ್ರೆ ಆಗ ಮಾತ್ರ ನಿಮ್ಮ ವಾದವನ್ನು ಮುಂದಿಡೋದು ಸುಲಭ. "ಮಹಾ ಪ್ರಸ್ಥಾನ"ದ ಮುನ್ನುಡಿಯಲ್ಲಿ ಅಂತಹ ಒಂದು approach ಅನ್ನೇ defend ಮಾಡಿಕೊಳ್ಳುತ್ತೀರ. ನವ್ಯರ ಸಾಧನೆ "ಕಾಮ ಮತ್ತು ವಿಡಂಬನೆ"ಗೆ ಮೀರಿದ್ದೆಂದೂ ನೀವು ಅಭಿಪ್ರಾಯಪಡತೀರ. ಹಾಗೆಯೇ, "ಕವಿ ತನ್ನ ಸಾಮಾಜಿಕ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳುವುದರಿಂದ ತನ್ನ ಸನ್ನಿವೇಶ ಪ್ರಜ್ಞೆಗೆ ಅಪಚಾರ ವೆಸಗಿದಂತೆ ಆಗುತ್ತದೆ" ಎಂದೂ ಹೇಳಿದ್ದೀರ. ನೋಡಿ, ನವ್ಯದವರ contradiction :- ಅವರೆಲ್ಲ "ತಮ್ಮ" ಸನ್ನಿವೇಶ ಪ್ರಜ್ಞೆಗೆ ಒಳಗಾಗಿದ್ದರೆಂಬುದು ಕುಹಕದ ಮಾತಲ್ಲ. ಬಾರು, ಹುಡುಗಿಯರು, ಸುಡುವ ಬಿಸಿಲು, ಸೂಳೆಯರು ಇತ್ಯಾದಿ. ಆದರೆ ಈ ಪ್ರತಿಮೆಗಳನ್ನು ಮೀರಿ ಮನುಷ್ಯನನ್ನು ಕಾಡುವ ಒಂಟಿತನ, ಸಂಕಟ—ಕಾಫ್ಕ ಮಾದರೀದು, ಕಮೂ ಮಾದರೀದು—ನಮ್ಮ ನವ್ಯರಿಗೆ ನಿಜವಾದ



ಶೂದ್ರ

ಅರ್ಥದಲ್ಲಿ ತಟ್ಟಿಯೇ ಇರಲಿಲ್ಲ. ಹೌದಾ ? ಇದಕ್ಕೆ ನಾವಿರುವ ಪರಿಸರ ನಮ್ಮ ಸಂಸ್ಕೃತಿಗಳೇ ಕಾರಣವಿರಬಹುದು, ಅಥವಾ ಇನ್ನೇನೋ ಇರಬಹುದು. ಆದ್ದರಿಂದ ನವ್ಯರು ತಮ್ಮ ಮೇಲೂ ಹಾಗೂ ಓದುಗರ ಮೇಲೂ ಇಂತಹವುಗಳನ್ನು ಬಲವಂತವಾಗಿ ಹೇರಲಿಕ್ಕೆ ಸುರು ಮಾಡಿದ್ದು ನಿಜವಲ್ಲವೇ ? ಇದಕ್ಕೆ ನೀವು ಹೊರತಾಗಿದ್ದೀರೋ, ಒಳಗಾಗಿದ್ದೀರೋ ?

ತಿರು : it is a good question. "ಕಾಮು" ದ ಬಗ್ಗೆ ನೀವು ನನ್ನನ್ನ ಅರ್ಥ ಮಾಡಿಕೊಂಡಿಲ್ಲ ಅನ್ನೋದು ನನ್ನ ಭಾವನೆ. "ಕಾಮು" ದ ಮೂಲಕ ನಾನು ಏನನ್ನಾದರೂ ಹೇಳಕ್ಕೆ ಹೊರಟಿದ್ದು ಬಹಳ ಕಡಿಮೆ- ಬಾಕಿ ನವ್ಯರಿಗೆ ಹೋಲಿಸಿದರೆ ನಾನು...

ಸು : ಆದರೆ ನಿಮ್ಮ "ಮುಖವಾಡಗಳು", ನಂತರದ "ವಠಾರ" ಅದೇಕೆ ನಿಮ್ಮ "ಮಹಾಪ್ರಸ್ಥಾನ" ಸಂಕಲನಗಳೆಲ್ಲಾ ಅಂತಹ "ಕಾಮು"ದ ಪ್ರತಿಮೆಗಳು ಬಹಳ ಇವೆ ?

ತಿರು : ನಾನು ಬರೆಯುವ ಸಮಯದಲ್ಲಿ ನವ್ಯ ಅನ್ನೋದು ದೊಡ್ಡ ಚಳುವಳಿಯಾಗಿತ್ತು. ಆದ್ದರಿಂದ ಯಾವುದೇ ದೊಡ್ಡ ಚಳುವಳಿ ಕಾಲದಲ್ಲಿ ಪ್ರವೇಶಿಸುವ ವ್ಯಕ್ತಿ ಕೂಡ ಆ ಚಳುವಳಿಯ ಜತೆ identify ಮಾಡಿಕೊಳ್ಳ ಬೇಕಾಗತ್ತೆ. ಅದು ಅವನು ಮಾಡದಿದ್ದರೂ ಇನ್ನೊಬ್ಬರು ಮಾಡಿರುತ್ತಾರೆ. ಅದ್ಹೇಗಿದ್ದರೂ, ಈ "ಕಾಮು" ನನ್ನ ಕಾವ್ಯದಲ್ಲಿ major issue ಆಗಲ್ಲ. ಯಾಕೆಂದರೆ, ಅದು ಒಂದು ರೀತಿ ಸವೆವಂತಹ ಪರಂಪರೆಯ ವಿರುದ್ಧ ಹೋರಾಡುವಂತಹ ಒಂದು instru-ment ಆಗಿರ್‍ತವೆ. ಅಲ್ಲಿ ನೋಡಿ, ಗೀತೆ ಬಗ್ಗೆ ಒಂದು ಕವನ ಇದೆ- "ಬಾತ್ ರೂಂ ಗೀತೆ" ಅಂತ. ಅದರಲ್ಲಿ ಕಾಮದ ಪ್ರತಿಮೆಗಳು ಬರತವೆ. "ಲಿಂಗೋದಕ" ಅಂತೆಲ್ಲಾ. ಅದು ಒಂದು ರೀತಿಯ protest ಎಂದೇ ನನ್ನ ಅನಿಸಿಕೆ. ಅಂತಹ (ಅಂದರೆ "ಕಾಮು" ದ ಪ್ರತಿಮೆಗಳ) ವಿಚಾರವನ್ನ 'ಪಬ್ಲಿಕ್'ನಲ್ಲಿ ಮಾತಾಡೋದೆ ತಪ್ಪು ಅನ್ನುವಾಗ ಅದರ ಬಗ್ಗೆ ಕವಿತೆ ಬರೆಯುವ ಮೂಲಕ ಒಂದು ರೀತಿಯ protest ಮಾಡೋಕೆ ಹೊರಟಿದ್ದು. ಹಳೆಯ value ಗಳನ್ನ ಮೀರೋದಕ್ಕೆ ಪ್ರಯತ್ನಿಸಿದ ಹಾಗೆ. ಆದರೆ "ಕಾಮು" ದ ಮೂಲಕವೇ ನಾನೆಲ್ಲವನ್ನೂ ಶೋಧಿಸಲು ಪ್ರಯತ್ನಿಸಿದೆ ಅನ್ನುವುದು ಅಷ್ಟು ಸರಿಯಲ್ಲ. ಅದು ಒಂದು. ಎರಡನೆಯದಾಗಿ ಹಾಗೂ ಮುಖ್ಯವಾಗಿ, "ನವ್ಯ" ಎಂದರೆ ನನ್ನ ಮಟ್ಟಿಗೆ ಪುಷ್ಪಗಳ ಬಗ್ಗೆ ಬರೆಯುವ ನಾಜೂಕು ಕಾವ್ಯವಲ್ಲ ಅನ್ನೋದು. ಕಾವ್ಯ ನಮ್ಮ ದೈನಂದಿನ ಜೀವನದ ಮೂಲಕ

ಉಂಟಾಗಬೇಕು, ನಮ್ಮ ಕಾವ್ಯದ ಪರಿಕರಗಳು ನಮ್ಮ ದೈನಂದಿಕದ್ದೇ ಆಗಿರಬೇಕು ಅನ್ನೋದು.

ಭಾಷೆಯ ದೃಷ್ಟಿಯಿಂದಲೂ ನಾವು ಜೀವನದ ಹತ್ತಿರ ಬಂದಿದ್ದೇವಲ್ಲ. ನೀವು ಆಗಿನ ಸನ್ನಿವೇಶ ನೋಡಿದ್ರೆ ನಿಮಗೆ ಅರ್ಥ ಆಗತ್ತೆ. ಆಗ ಬರೆಯುತ್ತಿದ್ದ ಕವಿಗಳಿಗೆ ಮೊದಲು ಬರೆಯುತ್ತಿದ್ದವರೆಲ್ಲ ಕೆಲವು ಪದಗಳನ್ನು, ಕೆಲವು ಶಬ್ದಗಳನ್ನು ಕಾವ್ಯದಲ್ಲಿ ಬಳಸಲೇಬಾರದು ಅನ್ನುವ ಮಡಿವಂತಿಕೆಯಿಂದ ಇದ್ದರು. ನನ್ನ "ಮುಖಾಮುಖಿ", "ಪತಾರ" ಸಂಕಲನಗಳನ್ನು ನೀವು ನೋಡಿದರೆ ಗೊತ್ತಾಗತ್ತೆ. ಆ ಮಡಿವಂತಿಕೆಯನ್ನು ಒತ್ತೊಗೆದು, ಎಲ್ಲದರ ಬಗ್ಗೆ ಕೂಡ ಬರೆಯಬಹುದು. ಎಲ್ಲವೂ ಸಾಹಿತ್ಯದ ವಸ್ತುಗಳೇ ಶಬ್ದವಾಗಲೀ, ಪದವಾಗಲೀ, ವಾಕ್ಯವಾಗಲೀ ಇನ್ನೇನೇ ಆಗಲೀ ಸಾಹಿತ್ಯಕ್ಕೆ ಅಸ್ಪೃಶ್ಯ ಅಂತ ಅನಿಸಿಕೊಳ್ಳಬಾರದು.

ವಿ. ಮೂರ್ತಿ: ನಿಜ, ನಿವೆಲ್ಲ ಆ Purity conceptನ ತೆಗೆದಿರಿ. ಎಲ್ಲ ಶಬ್ದಗಳಿಗೂ ಒಂದು ರೀತಿಯ democratic value ಬಂತು. ...ಆದರೆ ಇಡೀ ಒಂದು ಪದ್ಯದ ಅಥವಾ ಇಡೀ ಒಂದು ಸಂಕಲನದ ಅಥವಾ ಇಡೀ ಒಬ್ಬ ಕವಿಯ expression ಇದೆಯಲ್ಲ— ಅವನ ಎಲ್ಲ ಸಂಕಲನಗಳ ಒಟ್ಟು ಕಾವ್ಯದ expression—ಅದು. ಜನಗಳಿಗೆ ತಲುಪುವ ದೃಷ್ಟಿಯಿಂದ ಭಾಷೆಯಲ್ಲಿ democratise ಆದದ್ದೋ, Conservative ಆದದ್ದೋ— ನವ್ಯದವರಲ್ಲಿ—ಅನ್ನೋದು ಪ್ರಶ್ನೆ.

ಶಿವು: ಆ ಪ್ರಶ್ನೆ ಆ ಮೇಲೆ ಬರ್ತದೆ ನೋಡಿ. ಒಂದೊಂದು ಕಾವ್ಯದಲ್ಲೂ ಚಾರಿತ್ರಿಕವಾದಂತಹ ಬಹಳ ಸಮಸ್ಯೆಗಳಿರುವುದರಿಂದ ನಾವು ಒಂದು ಕಾಲದಲ್ಲಿ ಒಂದೋ ಅಥವಾ ಎರಡೋ ಸಮಸ್ಯೆಗಳನ್ನ ಮಾತ್ರ ಎದುರಿಸಲಿಕ್ಕೆ ಸಾಧ್ಯ. ಆಗಿನ ವಿರೋಧಿಗಳು ಯಾರಾಗಿದ್ದರು? ಭಾಷೆಯ ಬಗ್ಗೆ "ಮಡಿ" ಮಾಡುತ್ತಿದ್ದವರು. ಕಾವ್ಯದ ಭಾಷೆ "ಸ್ಪೆಷಲ್" ಆಗಿರಬೇಕು ಅಂತಿದ್ದರು. ಅದರ ವಿರುದ್ಧವಾಗಿ ಬಂದಂತಹ ಕೆಲವು ಕವಿಗಳು, ಅವರ ಜತೆ ನಾನೂ ಇಳಿಯಬೇಕಾಯಿತು... ನಾನು ಹಾಗೆಂದ ಮಾತ್ರಕ್ಕೆ ನವ್ಯವನ್ನು defend ಮಾಡೋದಾಗಲೀ, attack ಮಾಡೋದಾಗಲೀ ಅಗತ್ಯವಿಲ್ಲ. "ಮುಖಾಮುಖಿ"ಯನ್ನ ನಾನು ಬರೀತಿದ್ದ ಹಾಗೆ ನಾನು ನವ್ಯದಿಂದ ದೂರವಾಗುತ್ತಲೇ ಬಂದೆ. ಈಗ ನನ್ನದೇ ದಾರಿಯಲ್ಲಿ ನಾನು ಹೋಗ್ತಾ ಇದೀನಿ. ಆದರೆ ನಾನು ಚಾರಿತ್ರಿಕವಾಗಿ ನೋಡುವಾಗ ಆ ಕಾಲದಲ್ಲಿ ಅವರಿಗೆ ಅದೇ ಆ ಮಡಿವಂತಿಕೆ ವಿರುದ್ಧವಾಗಿ ಹೋರಾಡೋದೇ ಒಂದು ದೊಡ್ಡ ಸಂಗತಿ

ಯಾಗಿತ್ತು. ಆ ಹೋರಾಟಾನ ಅವರು ನಡೆಸಿದರು. ಮುಂದಿನ ಮಜಲಿನಲ್ಲಿ, ಬಂಡಾಯ ದಲಿತ ಇತ್ಯಾದಿ movement ಗಳಲ್ಲಿ ನಮ್ಮ ಜನರಿಗೆ ಸಾಹಿತ್ಯಾನ ಹೇಗೆ ತಲುಪಿಸೋದು ಅನ್ನೋದು ಮುಖ್ಯವಾಗತ್ತೆ. ನೋಡಿ, ಚರಿತ್ರೆಯಲ್ಲಿ ಒಂದೊಂದು ಹೋರಾಟ ನಡೀತಿದ್ದ ಹಾಗೆ, ಆ ಹೋರಾಟದ ನಂತರ ಬಂದವರಿಗೆ ಅದೇ ವಿಚಾರದ ಬಗ್ಗೆ ಹೋರಾಡುವ ಅಗತ್ಯವಿರುವುದಿಲ್ಲ. ಯಾಕೆಂದರೆ, ಹಿಂದಿನವರು ಆಗಲೇ ಆ ಹೋರಾಟವನ್ನ ನಡೆಸಿರ್ತಾರೆ, ಮುಗಿಸಿಯೂ ಇರ್ತಾರೆ. ಹಾಗೆಯೇ, ನವ್ಯರಲ್ಲಿ ಆ ಮಡಿವಂತಿಕೆ ವಿರುದ್ಧ ಹೋರಾಟ ನಡೆಯಿತು. ನಂತರ ಆ ಮಡಿವಂತಿಕೆ ಬಗ್ಗೆ ಇದ್ದ ಕಾನ್‌ಸೆಪ್ಟೇ ಹೋಯಿತು, ಆ ನಂತರದ ಹೋರಾಟ ಆ ಮಟ್ಟಿಗೆ ಸುಲಭವಾಯಿತು. ಈ ವಿಚಾರವನ್ನ Objective ಆಗಿ ನೋಡಿದರೆ ನವ್ಯರ Contribution ಏನು ಅಂತ ಗೊತ್ತಾಗ್ತದೆ. ನಾನು ನವ್ಯರನ್ನು defend ಮಾಡ್ತಾ ಇಲ್ಲ. ನಾನೇ Objective ಆಗಿ ಹೊರಗೆ ನಿಂತು ನನ್ನನ್ನು ನಾನೇ ನೋಡಿದ್ದರಿಂದ ಹೀಗೆ ಹೇಳಬಹುದು.

ಸು : ಇದರಿಂದ ಸಹಜವಾಗಿ ಬರಬಹುದಾದ ಒಂದು ಪ್ರಶ್ನೆಯೆಂದರೆ : ಆ ನವ್ಯ ಸಾಹಿತ್ಯ ಅನ್ನೋದು ವಿದ್ಯಾವಂತ ಮಧ್ಯಮ ವರ್ಗದಿಂದ ಬಂದಂತಹದಾಗಿತ್ತು. ನೀವು ಹೇಳುವ ಪ್ರಕಾರ, ನವ್ಯ ಸಾಹಿತ್ಯ had already paved way for the next movement—ಚಾರಿತ್ರಿಕವಾಗಿ, ಅಂದರೆ ಪರಂಪರೆಯ ದೃಷ್ಟಿಯಿಂದ. ನವ್ಯ ಸಾಹಿತ್ಯದಿಂದ ದಲಿತ, ಬಂಡಾಯ ಸಾಹಿತ್ಯಗಳು ಹುಟ್ಟಿದವು ಅಂತ ಅಲ್ಲವೇ ? ನವ್ಯದಿಂದ ಒಂದು Continuity ಇದೆ ಅಂದಹಾಗಾಯಿತೇ ?

ತಿರು : See, Continuity ಅನ್ನೋದು ಇದ್ದೇ ಇರತ್ತೆ. ಇಲ್ಲದಿದ್ದರೆ ಅದು abberation ಅಂತ. ಅಂದರೆ ಒಂದು ಅಸ್ವಾಭಾವಿಕವಾದ ಬೆಳವಣಿಗೆಯಾಗ್ತದೆ. ಮರದಲ್ಲಿ ಬಂದಣಿಕೆ ಬೆಳೆಯುವ ಹಾಗೆ. ಮರದಲ್ಲಿ ಬಂದಣಿಕೆ ಬೆಳೆದಾಗ ಅದು ಮರವನ್ನೇ ಆಶ್ರಯಿಸಿಕೊಂಡಿರಬೇಕಾಗತ್ತೆ. ಅಂದರೆ ಬೇರೆ ಬೇರೆ ಹೊಸ ಮರಗಳೇ ಹುಟ್ಟಿಕೊಂಡರೆ ಅದು ಬಂದಣಿಕೆಯಾಗಿರೊಲ್ಲ. ಅದೇ ರೀತಿಯಲ್ಲಿ, ಯಾವ ಸಾಹಿತ್ಯ ಮಾರ್ಗವನ್ನೇ ತೆಗೆದುಕೊಂಡರೂ, ಅದು ಬಂದಣಿಕೆಯಾಗಿ ಹೊರಟಿದೆಯಾ ಅಥವಾ ಅದು ಮರಗಳ ಜತೆ ಮರಗಳಾಗಿ ಹುಟ್ಟಿವೆಯಾ ಅಂತ ನೋಡಬೇಕಾಗ್ತದೆ. ಹಾಗೆ ನೋಡಿದಾಗ ಈ ನವ್ಯವಾಗಲೀ ಬಂಡಾಯವಾಗಲೀ, ನವೋದಯವಾಗಲೀ ಯಾವುದೂ ಬಂದಣಿಕೆಯಲ್ಲ. ನೈಸರ್ಗಿಕವಾಗಿ ಬೆಳೆದು ಬಂದಂತಹ ಮಾರ್ಗಗಳೇ. ಈ ಪ್ರಶ್ನೆ ಪರಂಪರೆಯ ಬಗ್ಗೆ - ಎಲ್ಲ ಕಾಲದಲ್ಲಿಯೂ

ಕೇಳಿಕೊಂಡು ಬಂದಂತಹ ಪ್ರಶ್ನೆಗಳೇ. ವಚನಕಾರ್ರು ಬಂದ್ರು. ಅವರು ಪ್ರತ್ಯೇಕವಾಗಿ ಬರೀಲಿಕ್ಕೆ ಸುರುಮಾಡಿದ್ರು. ಆಗಲೂ ಈ ಪ್ರಶ್ನೆ, ಇದು ಕನ್ನಡದ ಪರಂಪರೆಗೆ ಸೇರ್ತದಾ ಅಥವಾ ಇಲ್ವಾ ಅನ್ನೋದು, ಇದ್ದಿರಬಹುದು. ಹಾಗೆಯೇ ರಾಘವಾಂಕನ ಬಗ್ಗೆ ಕುಮಾರ ವ್ಯಾಸನ ಬಗ್ಗೆಯೂ ಇದ್ದಿರಬಹುದು. ಅದನ್ನ ಅದೇ ಕಾಲದಲ್ಲಿ ಉತ್ತರಿಸೋದು ಸ್ವಲ್ಪ ಕಷ್ಟವಾಗಬಹುದು. ಆದರೆ ಅವರನ್ನೆಲ್ಲ ಹಿಂದಿರುಗಿ ನೋಡಿದಾಗ ನಮ್ಮ ಹಿಂದೆಯೇ ಇದ್ದಾರೆ ಅನ್ನಿಸ್ತದೆ. ಯಾವುದೇ ಅರ್ಥಪೂರ್ಣ ಚಳುವಳಿಯೂ ಪರಂಪರೆಗೆ ಸೇರೇ ಸೇರ್ತದೆ. ಏಕೆಂದರೆ ಅದು ಸಾಹಿತ್ಯಕ್ಕೆ ಏನನ್ನೋ ಮಾಡಿರ್ತದೆ. ಸಾಹಿತ್ಯದ ಚಿಂತನೆಯಲ್ಲಿ ಅಥವಾ ಭಾಷೆಯ ಒಂದು ಶೈಲಿಯಲ್ಲಿ, ಏನೋ ಒಂದು ರೀತಿಯಲ್ಲಿ ಪ್ರಭಾವಬೀರಿರುತ್ತದೆ. ಇಲ್ಲದಿದ್ದರೆ ನಾನು ಹಿಂದೆ ಹೇಳಿದ ಹಾಗೆ ಒಂದಾಣಿಕೆಯೇ ಆಗಿರಬೇಕಾಗಿತ್ತು.

(ಮುಂದಿನ ಭಾಗವನ್ನು ಮಾರ್ಚ್ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸುವೆವು. ಓದುಗರು ಸಹಕರಿಸಬೇಕಾಗಿ ವಿನಂತಿ).

---

"Do not let us fall into common mistake of expecting to become one flesh and one spirit. Every Star has its nearest neighbour there is not only a powerful attraction but an infinite distance. When the attraction becomes stronger than the distance the two do not embrace ; they crash together in ruin.

—BERNARD SHAW.

---

# [illegible]ದ [illegible] ಮೌನ ಸತ್ಯಗಳು

ಒಂದು ಸೂರಿನಡಿ
ಗಳಿತ
ನನಗೆ ನನ್ನ
ದೇಹವ ಉಂಡು,
[illegible]ದೇ, ಕಕ್ಕ
ಹೋಗುತ್ತಿರುವವರ
ಸುಖಗಳು,
ನನ್ನ ಮನದ ಮೌನ
ರೋದನಗಳು.

[illegible]ಯು
[illegible] ದೀಪಗಳು
ನನ್ನ ರಕ್ತವ ಪಡೆದು
ಕಾರುತ್ತಿವೆ!
ಅದರ ಕೆಳಗೆ:
ಗೆಜ್ಜೆಯ ಸದ್ದು
ಸೀರೆಯ ನೆರಿಗೆಗಳು,
ಮುಂಗುರಳ ಹಾರಾಟ
ನನ್ನ ಮನದ ಕರೆಯಲ್ಲ.
ನನ್ನ ಮೇಲೆ ಹಕ್ಕು
ಪಡೆದವರ ಕರೆಗಳು.

ದಿನವೂ
ನನ್ನವರಿಗಾಗಿ
ಕಾಯುತ್ತೇನೆ, ನಿತ್ಯದ
ಬದುಕಿಗಾಗಿ;
ಆದರೂ ಕಾಯುತ್ತೇನೆ
ನನ್ನ ಹೃದಯ ಬಲ್ಲವರಿಗೆ
ಸೂರ್ಯನನ್ನೇ ಕಾಣದ
ನನಗೆ ನಾನಷ್ಟೇ ಸತ್ಯ
ನನ್ನೀ ಮಾತುಗಳು.

—ಆರ್. ವೆಂಕಟೇಶಮೂರ್ತಿ

# ಮೃತ್ಯುಂಜಯ

ಮೂಲ: ಬೈರಾಗಿ

ಮೃತ್ಯುವನ್ನು ಕಂಡಲ್ಲ ನಾನು, ಬದುಕಿನ ರೀತಿಗೆ ಹಿಂಜರಿಯುತ್ತಿದ್ದೇನೆ.
ಹಂತಕನ ಕತ್ತಿ ಕಂಡಲ್ಲ, ಕಣ್ಣ ದ್ವೇಷಕ್ಕೆ ಅಂಜುತ್ತಿದ್ದೇನೆ;
ಮನದಾಳದಲ್ಲಿ ಹುದುಗಿದ ಕ್ರೌರ್ಯ ಕಂಡು ಭಯಪಡುತ್ತಿದ್ದೇನೆ.

ಮುಷ್ಠಿ ಮಣ್ಣಿನಲ್ಲಿದೆ ಸಾವು
ಹಿಡಿ ಬೂದಿಯಲ್ಲಿದೆ ಸಾವು
ಮನದಾಳದಲ್ಲಿ ದೇಹದ ಅಣು ಅಣುವಲ್ಲಿ, ಕಣ ಕಣದಲ್ಲಿ, ಕ್ಷಣ ಕ್ಷಣದಲ್ಲಿ ಸಾವಿದೆ.

---

5ನೇ ಸೆಪ್ಟಂಬರ್ 1925ರಲ್ಲಿ ಆಂಧ್ರದ ತೆನಾಲಿಯ ಇತಾ ನಗರದಲ್ಲಿ ಜನಿಸಿದ ಆಲೂರಿ ಬೈರಾಗಿ, ಸಾಹಿತ್ಯ ಪ್ರಿಯರಿಗೆ 'ಬೈರಾಗಿ' ಎಂಬ ಹೆಸರಿನಿಂದ ಚಿರಪರಿಚಿತರಾದವರು. 1978ರಲ್ಲಿ ಕ್ಷಯರೋಗಕ್ಕೆ ಬಲಿಯಾದ ಈ ಕವಿ ಸಾಹಿತ್ಯ ಕೃಷಿಯಲ್ಲಿ ಮೊದಲು ತಮ್ಮನ್ನು ತೊಡಗಿಸಿಕೊಂಡದ್ದು ಹಿಂದಿ ಭಾಷೆಯ ಮೂಲಕ. 'ಪಲಾಯನ್' ಇವರ ಹಿಂದಿ ಕವನ ಸಂಕಲನ. ನಂತರ ತೆಲುಗಿನಲ್ಲಿ ಕಾವ್ಯ ರಚನೆ ಮಾಡಿದ ಇವರ ಮೊದಲ ಕವನ ಸಂಗ್ರಹ 'ಚೀಕಟಿ-ನೀಡಲು' (ಕತ್ತಲು-ನೆರಳು). ನಂತರ ಪ್ರಕಾಶಕ್ಕೆ ಬಂದು, ಕವಿಗೆ ತೆಲುಗು ಕಾವ್ಯಲೋಕದಲ್ಲಿ ಸುಸ್ಥಿರ ಸ್ಥಾನವನ್ನು ದೊರಕಿಸಿಕೊಟ್ಟ ಕವನ ಸಂಕಲನಗಳು ; 'ನೂತಿಲೊ ಗೊಂತುಲು' (ಬಾವಿಯಲ್ಲಿ ಧ್ವನಿಗಳು), 'ದಿವ್ಯ ಭವನಂ'.

Radical humanismನಲ್ಲಿ ಗಾಢವಾದ ವಿಶ್ವಾಸ ಹೊಂದಿದ್ದ. ಅದರ ಉನ್ನತಿಗಾಗಿ, ದುಡಿದ ಕವಿ ಬೈರಾಗಿ. 'ಮೃತ್ಯುಂಜಯ' ಅವರ 'ನಾಕು ಚಾವುಲೇದು' ಎಂಬ ಕವಿತೆಯ ರೂಪಾಂತರ.

---

ಸ. ರಘುನಾಥ, ಕನ್ನಡ ಉಪಾಧ್ಯಾಯ, ಗೌನಿಪಲ್ಲಿ, ಶ್ರೀನಿವಾಸಪುರ ತಾ, ಕೋಲಾರ ಜಿಲ್ಲೆ

ನೋಟದಲ್ಲಿ, ರೂಪದಲ್ಲಿ, ಕಾಮನೆಸೆವ ಬಾಣದಲ್ಲಿ,
ಪ್ರೀತಿಯಲ್ಲಿ, ಭೀತಿಯಲ್ಲಿ, ಪುಣ್ಯ ಪ್ರಸವ ಗೀತೆಯಲ್ಲಿ.

ಹುವ್ವಿನಲ್ಲಿ ಹುಳವಿದ್ದಂತೆ
ಮಧುರ ಮುಗುಳು ನಗೆಯಲ್ಲಿ ಕಳ್ಳನಂತೆ ಸಾವಿದೆ.

ಮೃತ್ಯುವಿರದ ಟಾವು ಹೇಳು
ಬದುಕಿನಲ್ಲಿ ನೆಲೆಯ ಕಟ್ಟಿ
ಪಾರಿಜಾತ ಚೆಲ್ಲಿ ಅಲ್ಲಿ ಸ್ವರ್ಗವನ್ನೆ ಸೃಜಿಸುವೆ.

ಕೇಳು ಗೆಳೆಯ, ಸಾವಿನೊಡನೆ ಕ್ಷಣಕ್ಷಣ
ಬದುಕನ್ನೆ ಪಣಕ್ಕೆ ಇಟ್ಟು ಪಗಡೆಯಾಟ ಆಡುತಿರುವೆ.
ಸಾವು ತಾನು ಕ್ಷಣಕ್ಷಣ ಸೋಲುತಿದೆ
ನನ್ನ ಬಿಟ್ಟು ಓಡುತಿದೆ.

ನನ್ನ ಶಿಲುಬೆ ನಾನು ಹೊತ್ತು
ಪಥಿಕನಾಗಿ, ಸಹಸ್ರ ಕಣ್ಣುಬಿಟ್ಟು ಹುಡುಕುತ್ತ ಬರುತ್ತಿರುವೆ
ಭೀಷ್ಮನಂತೆ ನನ್ನ ಮರಣ ರಹಸ್ಯ ನಾನೆ ಸಾರುತಿರುವೆ-
ಉತ್ತರಾಯಣಕ್ಕಾಗಿ, ಸ್ವೇಚ್ಛಾಮರಣಕ್ಕಾಗಿ ಕಾಯುತಿರುವೆ.

ಸಾವು ಕಂಡೇಕೆ ನನಗೆ ಭಯ
ತೆರೆದ ಸೆರೆಯ ಬಾಗಿಲಂಥದು,
ನಿರಾಸೆಯ ಹಾದಿಗೆ ಹೊಸ ತಿರುವು
ದೂರದ ಒಲವಿನ ಕರೆಯಂಥದು, ಸಾವು.

ಆದರೂ ಕೇಳು - ನನಗಿಲ್ಲ ಸಾವು
ನಾನು ಸೃಜಿಸಿದ ಅನಂತ
ಜೀವನ ವಸಂತ ವನದಲ್ಲಿ ಸಾವಿಲ್ಲ ನನಗೆ
ನಾನು ಮಾನವ.

ಪ್ರಾಣದಾತೆ ಪುಣ್ಯಧಾತ್ರಿ ಕನಕಗರ್ಭ ಸಮುದ್ಭವ
ವೇದನಾಗ್ನಿ ಸಂಭವ, ಶಿವ
ನಿತ್ಯ ನವೀನ ನರ ಮಾನವ
ನನಗಿಲ್ಲ ಮರಣ.

ಬ್ರಹ್ಮಾಂಡದ ನೆರಿಗೆ ಕೋಣೆಯಲ್ಲಿ ಕಪ್ಪೆಂದು ಕೂಸಿನ ಅಳು ಕೇಳುತ್ತಿರುವವರೆಗೆ
ಬಾಣಂತಿಯ ಕೆನ್ನೆಯ ಮೇಲೆ ಅರಿಶಿಣದ ಹೊಸತನದ ಹೊಸಕಾಂತಿ
ಹೊಳೆಯುತ್ತಿರುವವರೆಗೆ,

ಬದುಕಿನ ಆಳದ ಕಡಲ ಕಿನಾರೆಯಲ್ಲಿ ನಲಿವ ಕಂದಮ್ಮಗಳ ಕೇಕೆ,
ಚಪ್ಪಾಳೆ ಧ್ವನಿ ಕೇಳಿ ಬರುತ್ತಿರುವವರೆಗೆ

ಸಾವಿಲ್ಲ ನನಗೆ
ನನಗಿಲ್ಲ ಸಾವು
ನಾನು ಮೃತ್ಯುಂಜಯನು
ಮಾನವನು

ರೂಪಾಂತರ : ಸ.ರಘುನಾಥ

—o—

"ಅಳಿಯಾಸೆಗಳ ಸುಳಿಗೆ ಸಿಲುಕಿದೆಲೆ ಮನವೇ!
ನೆಲೆಯಿರದೆ ತೊಳಲುವುದು ಮನುಜ ಜೀವನವೆ?
ನನೆಬೇಕು, ಕೊನೆಬೇಕು ನರನ ಬಾಳುವೆಗೆ
ದಿನದ ಗೈಮೆಯ ಹೂವು ಫಲಿಸಿ ಬರುವುದಕೆ"

—ಗೋಪಾಲಕೃಷ್ಣ ಅಡಿಗ

# ಸೃಷ್ಟಿ ಪ್ರಕ್ರಿಯೆ ಹಾಗೂ ಯಶವಂತ ಚಿತ್ತಾಲ-ಒಂದು ಟಿಪ್ಪಣಿ

—ರಾಮಚಂದ್ರ ಶರ್ಮ

ಮೊನ್ನೆ ಅಂದರೆ ಸಾಹಿತ್ಯ ಅಕಾಡೆಮಿ ಕನ್ನಡ ಕಾದಂಬರಿಯ ಪರಂಪರೆಯ ಬಗ್ಗೆ ನಡೆಸಿದ ಕಮ್ಮಟದ ಸಂದರ್ಭದಲ್ಲಿ ನಮ್ಮ ಮುಖ್ಯ ಕಾದಂಬರಿಕಾರರಲ್ಲೊಬ್ಬರಾದ ಯಶವಂತ ಚಿತ್ತಾಲರು ಮಾತಾಡಿದರು. ಕನ್ನಡ ಕಾದಂಬರಿಯ ಪರಂಪರೆಯ ಪ್ರಭಾವ ತಮ್ಮ ಮೇಲಿದ್ದರೂ ತಾವು ಹೇಗೆ ಅದರಿಂದ ಪ್ರತ್ಯೇಕವಾಗಿದ್ದಾರೆ ಅನ್ನುವುದನ್ನು ಗುರುತಿಸುವ ಕೆಲಸವನ್ನು ಎತ್ತಿಕೊಂಡ ಚಿತ್ತಾಲರು ತಮ್ಮ ಸೃಷ್ಟಿ ಪ್ರಕ್ರಿಯೆಯ ಬಗೆಗೇ ಮಾತಿನ ಬಹು ಭಾಗವನ್ನು ಮೀಸಲಾಗಿಟ್ಟರು.

ಅವರು ಹೇಳಿದ್ದನ್ನು ಅಂದರೆ ನನಗೆ ಅರ್ಥವಾದದ್ದನ್ನು ಈ ಮಾತುಗಳಲ್ಲಿ ಸಂಗ್ರಹಿಸಬಹುದು :

> ಮಾನವನ ಜೀವಂತ ಚಟುವಟಿಕೆಗಳಲ್ಲಿ ಸಾಹಿತ್ಯವೂ ಒಂದು. ಮನುಷ್ಯ ಮನುಷ್ಯನನ್ನು ಮುಟ್ಟುವ ಒಂದು ಕ್ರಮ ಸಾಹಿತ್ಯ. ಅನುಭವವನ್ನು ಗ್ರಹಿಸುವ ಕಾರಣಗಳಲ್ಲಿ ಸಾಹಿತ್ಯವೂ ಒಂದು. ಸಾಹಿತ್ಯದ ಸಂದರ್ಭದಲ್ಲಿ ಎರಡು ಬಗೆಯ ಅನುಭವಗಳು ಮುಖ್ಯವಾಗುತ್ತವೆ-ಆದ ಅನುಭವ ಹಾಗೂ ಆಗಲಿಕ್ಕೆ ಹೊರಟ ಅನುಭವ. ಎರಡನೆಯದಕ್ಕೆ ಅಸ್ತಿತ್ವ ಬರುವುದು ಸಾಹಿತ್ಯ ಕೃತಿಯಾಗುವುದರ ಮೂಲಕವೇ. ರಕ್ತದ ಬಗ್ಗೆ ಆರೋಗ್ಯಶಾಸ್ತ್ರದ ಒಂದು ಪುಸ್ತಕ ಕೊಡುವ ಅನುಭವಕ್ಕೂ ಜಾನಕಿಗೆ ರಕ್ತದ ಕ್ಯಾನ್ಸರ್ ಅಂದಾಗ ಆಗುವ ಅನುಭವಕ್ಕೂ ಮೂಲಭೂತ ವ್ಯತ್ಯಾಸವಿದೆ. ('ಕತೆಯಾದಳು ಹುಡುಗಿ'). ಕಾದಂಬರಿಯೆಂದರೆ Emotionಗೆ ಒಂದು Structure ಅಥವಾ Feelingಗೆ ಒಂದು Pattern ಅನ್ನು ಕೊಡುವ ಕ್ರಮ. ಮುಖ್ಯವಾದದ್ದು ಭಾವನೆ, ವಿಚಾರವಲ್ಲ. ಭಾವನೆಯ ಮೂಲಕ ಹಾದು ಹೋಗದ ವಿಚಾರಕ್ಕೆ ಸ್ಥಾನವಿಲ್ಲ.
>
> ಭಾವ ಪ್ರತಿಮೆಗಳ ರಚನಾ ವಿನ್ಯಾಸವೇ ಗೆಸ್ಟಾಲ್ಟ್. ಗೆಸ್ಟಾಲ್ಟಿನಲ್ಲಿ ಕ್ಷೋಭೆಯಾದಾಗ ಸೃಜನಶೀಲ ಮನುಷ್ಯ ಅದನ್ನು ಅದರ ಮೂಲ ಸ್ಥಿತಿಗೆ ತರುವ

ಬಿ. ಹಿ. ರಾಮಚಂದ್ರಶರ್ಮ, 222, 39ನೇ 'ಹಿ' ಕ್ರಾಸ್, 5ನೇ ಬ್ಲಾಕ್, ಜಯನಗರ, ಬೆಂಗಳೂರು–560 041

ಪ್ರಯತ್ನದಲ್ಲಿ ಮಗ್ನವಾಗುತ್ತದೆ. ಸೃಷ್ಟಿ ಕ್ರಿಯೆಯಲ್ಲಿ ರ್‍ಯಾಷನಲ್ ಆದದ್ದರ ಜೊತೆ ಜೊತೆಗೇ ಇಮೋಷನಲ್ ಆದ ಅಂಶವೂ ಸೇರಿರುತ್ತದೆ. ಅರಿವಾಗೆ ಇನ್ನೂ ಬಾರದಿದ್ದನ್ನು ಅಂದರೆ ಆಗಲಿರುವ ಅನುಭವವನ್ನು ಅರಿವಿಗೆ ಬಂದ ಎಲ್ಲದರ ಮೂಲಕ ಅಂದರೆ ಆದ ಅನುಭವಗಳ ಮೂಲಕ ಗ್ರಹಿಸುವುದೇ ಕಾದಂಬರಿಯ ಕೆಲಸ. Art is the method of giving shape to unknown in a conscious state.......

ಚಿತ್ತಾಲರು ಆಡಿದ್ದರಲ್ಲಿ ಆಗ್ರಹವಾದದ್ದಾಗಲೀ ಅಥವಾ ಆಕ್ಷೇಪಣೆಗೆ ಗುರಿಯಾಗುವಂತಹದ್ದಾಗಲೀ ಇಲ್ಲ. ಕಾದಂಬರಿಯ ಸೃಷ್ಟಿಯ ಬಗ್ಗೆ ಅವರು ಮಾತಾಡಿದರೂ ಅವರು ಕೊಟ್ಟ ಮಾಡೆಲ್ ಕಾವ್ಯಸೃಷ್ಟಿಗೂ ಅನ್ವಯವಾಗುವಂತಹದೆನ್ನುವುದು ನನ್ನ ಅನಿಸಿಕೆ. ತಮ್ಮ ಮಾತಿಗೆ ನೆರವಾಗಲೆಂದು ತಂದಿದ್ದ ಚಿತ್ರಪಟಗಳಿಂದ ನನ್ನ ಮಟ್ಟಿಗಂತೂ ಹೆಚ್ಚಿನ ಲಾಭವಾಗಲಿಲ್ಲ. ಅದು ಬೇರೆ ಮಾತು.

ನನ್ನ ಪ್ರಶ್ನೆ ಸೃಜನಶೀಲ ಸಾಹಿತಿಯೊಬ್ಬ ತನ್ನ ಸೃಷ್ಟಿಕಾರ್ಯದ ಬಗ್ಗೆ ವ್ಯಾಖ್ಯಾನ ಮಾಡುವುದರಲ್ಲಿನ ಔಚಿತ್ಯಕ್ಕೆ ಸಂಬಂಧಿಸಿದ್ದು ; ಅಂಥ ಪ್ರಯತ್ನದ ಸೋಲು ಗೆಲುವಿಗೆ ಸಂಬಂಧಿಸಿದ್ದು.

ಹೋದ ವರ್ಷ ಆಕಾಶವಾಣಿಯವರು ಸಾಹಿತ್ಯ ಮತ್ತು ಮನಃಶಾಸ್ತ್ರ ಅನ್ನುವ ವಿಷಯವನ್ನು ನನಗೆ ಕೊಟ್ಟಾಗ ನಾನು ಬರೆದ ಇಂಗ್ಲೀಷ್ ಲೇಖನದ ಒಂದು ಭಾಗದ ಕನ್ನಡ ರೂಪವನ್ನು ಇಲ್ಲಿ ಕೊಡುತ್ತಿದ್ದೇನೆ :

ಮನಃಶಾಸ್ತ್ರ ತನ್ನ ವಿಶೇಷವಾದ ಗಮನವನ್ನು ಹರಿಸುವುದು ಸೃಷ್ಟಿಕಾರ್ಯದ ದಿಕ್ಕಿನಲ್ಲಿ. ಸೃಷ್ಟಿಕ್ರಿಯೆಯಲ್ಲಿ ಅತಾರ್ಕಿಕ ಅಥವಾ ತರ್ಕಾತೀತವಾದ ಒಂದಂಶ ಅಡಗಿದೆಯೆನ್ನುವುದು ಹಳೆಯ ಮಾತು. ಹುಚ್ಚು ಹಿಡಿದವನು ಮಾತ್ರ ಕವಿಯಾದಾನು ಅನ್ನುವ ಸಾಕ್ರೆಟೀಸನ ಮಾತನ್ನೋ ಅಥವಾ ಹುಚ್ಚರ ಜೊತೆಗೆ ಕವಿಗಳನ್ನು ಶೇಕ್ಸ್‌ಪಿಯರ್ ಇಟ್ಟಿದ್ದನ್ನು ನಾವು ನೆನಪು ಮಾಡಿಕೊಂಡರೆ ಸಾಕು. ಪ್ರಜ್ಞಾಪೂರ್ವಕರಾಗಿ ನಾವು ಎಷ್ಟೆಷ್ಟು ಪ್ರಯತ್ನ ಮಾಡಿದರೂ ನಮಗೆ ದಕ್ಕದೇ ಉಳಿಯುವ ಮನಸ್ಸಿನ ಕೆಳಸ್ತರವಾದ ಅಜ್ಞಾತವೇ ಸೃಷ್ಟಿಕಾರ್ಯದ ಉಗಮಸ್ಥಾನವೆಂದು ಹೇಳಿದ ಫ್ರಾಯ್ಡ್. ಸಾಮಾನ್ಯನಿಗೆ ಆ ಸ್ಥಳಕ್ಕೆ ಪ್ರವೇಶ ದುಸಾಧ್ಯವೆಂದೂ ಕವಿಯಾದವನಿಗೆ ಕೊಂಚ ಮಟ್ಟಿಗೆ ಪ್ರವೇಶ ಸಾಧ್ಯವೆಂದೂ ಹೇಳಿದ ; ಕವಿಯಾದವನಿಗೂ ಅಜ್ಞಾತದ ತಲಾತಲದ ಸ್ಪರ್ಶ ಸಾಧ್ಯವಿಲ್ಲವೆನ್ನುವುದೇ ಫ್ರಾಯ್ಡನ ಮತ. ಪ್ರಜ್ಞೆಯ ತರ್ಕದಾಚೆಗೆ ಕ್ಷಿತಿಜದಂತೆ ನಿಂತು ನಾವು ಹತ್ತಿರ ಬಂದಷ್ಟು ದೂರ ನಲಿದು ಕಿಲಕ್ಕನೆ ನಗುವಂತಹದು ಸೃಷ್ಟಿಕಾರ್ಯ. ತಮ್ಮ

ಸೃಷ್ಟಿಪ್ರಕ್ರಿಯೆಯ ಬಗ್ಗೆ ಕೆಲವೊಂದು ಕವಿಗಳೇ ಬರೆಯುವ ಸಾಹಸ ಮಾಡಿದ್ದರೂ ಅವರು ಹೇಳಬಹುದಾದನ್ನೆಲ್ಲ ಹೇಳಿದ್ದಾರೆ ಅಂತನ್ನಿಸುವುದಿಲ್ಲ, ಕಾರಣ, ಅದರಲ್ಲಿ ಕೊನೆಗೂ ಉಳಿಯುವ ನಿಗೂಢತೆಯ ಅಂಶ.

ಇಲ್ಲಿರುವ ಸಮಸ್ಯೆ ತರ್ಕಶಾಸ್ತ್ರಕ್ಕೆ ಸಂಬಂಧಿಸಿದ್ದು :

ತರ್ಕಕ್ಕೊಗ್ಗದ ಹಾಗೂ ಭಾವಪ್ರಧಾನವಾದ ಒಂದು ಪ್ರಕ್ರಿಯೆಯನ್ನು ಅರ್ಥ ಮಾಡಿಕೊಳ್ಳುವದಕ್ಕೆ ನಾವು ಬಳಸುವ ಒಂದು ಸಲಕರಣೆ ತರ್ಕ-ಪ್ರಜ್ಞೆಯು ಉತ್ತಳಿಕೆಯಲ್ಲಿರುವ ಸಮರ್ಥವಾದ ಆದರೆ ತರ್ಕಾತೀತವಾದ ಇಂಥ ಸಂದರ್ಭಕ್ಕೆ ಸಲ್ಲದ ಬಾಣ. ಎಷ್ಟೇ ಆದರೂ ಸೃಷ್ಟಿಕ್ರಿಯೆ ಭಾವನಾ ಪ್ರಪಂಚದ ಒಂದು ವ್ಯಾಪಾರ. ಅದರ ವೃತ್ತದಾಚೆಗೆ ನಿಂತ ಬುದ್ಧಿ ವೃತ್ತದೊಳಗೆ ನಡೆಯುವ ಆಗು ಹೋಗುಗಳ ಬಗ್ಗೆ ವ್ಯಾಖ್ಯಾನ ಮಾಡಬಹುದೇ ವಿನಹ ಕೇಂದ್ರದ ನಿಗೂಢ ವ್ಯಾಪಾರವನ್ನು ಗ್ರಹಿಸುವುದು ಸಾಧ್ಯವೇ ಇಲ್ಲ...

ಇವೊತ್ತಿನ ಗುಟ್ಟಿಗೆ ಇಷ್ಟು ಸತ್ಯ :

ಸೃಷ್ಟಿಪ್ರಕ್ರಿಯೆಯನ್ನೂ ತಮ್ಮ ಕಾವ್ಯಕ್ಕೆ ವಸ್ತುವನ್ನಾಗಿ ಮಾಡಿಕೊಂಡಕವಿಗಳಿಂದ ಹೊಮ್ಮುವ ಬೆಳಕು ಅದರ ಬಗ್ಗೆ ಶಾಸ್ತ್ರೀಯವಾಗಿ ಬರೆದ ಪ್ರಬಂಧಗಳಿಂದ ಹೊಮ್ಮುವುದಿಲ್ಲ.

ಯಶವಂತ ಚಿತ್ತಾಲರು ಸ್ವತಃ ಸೃಜನಶೀಲ ಲೇಖಕರಾಗಿ ತಮ್ಮ ಸೃಷ್ಟಿಪ್ರಕ್ರಿಯೆಯ ಬಗ್ಗೆ ವಿಶ್ಲೇಷಣೆ ಮಾಡಿದ್ದರ ಔಚಿತ್ಯದ ಹಾಗೂ ಯಶಸ್ಸಿನ ಸಾಧ್ಯತೆಯ ವಿಷಯ ಇಷ್ಟು ಸಾಕು.

ಇನ್ನೂ ಒಂದು ಪ್ರಶ್ನೆ : ಯಶವಂತ ಚಿತ್ತಾಲರು ಅನುಸರಿಸಿದ ಕ್ರಮ Introspection ರೀತಿಯದು– ಒಬ್ಬ ವ್ಯಕ್ತಿ ತನ್ನಲ್ಲಾಗುತ್ತಿರುವದನ್ನು ಅರ್ಥ ಮಾಡಿಕೊಳ್ಳುವದಕ್ಕೆ ಮಾಡುವ ಪ್ರಯತ್ನ. ಹೋದ ಶತಮಾನದ ಮಧ್ಯದ ಹೊತ್ತಿಗಾಗಲೇ ಮನಃಶಾಸ್ತ್ರ ಇಂಥ ಅಭ್ಯಾಸವನ್ನು ಬಿಟ್ಟು ಕೊಟ್ಟಿತು. ಕಾರಣ: ಸಂಶೋಧಕನಿಗೂ ಸಂಶೋಧನೆಗೆ ಎತ್ತಿಕೊಂಡ ವಿಷಯಕ್ಕೂ ಒಂದಿಷ್ಟು ದೂರ ಅತ್ಯಗತ್ಯ. ಅಂದರೆ, ಯಶವಂತರ ಸೃಷ್ಟಿಪ್ರಕ್ರಿಯೆಯನ್ನು ಯಶವಂತರೆ ಅಭ್ಯಾಸ ಮಾಡುವುದು ಅಸಾಧ್ಯ. ಬೇರೆಯವರು ಯಶವಂತರು ಬರೆದ ಕತೆಗಳ ಅಥವಾ ಕಾದಂಬರಿಗಳ ಆಧಾರದ ಮೇಲೆ ಅವರ ಸೃಷ್ಟಿಪ್ರಕಿಯೆ ಎಂತಹದು ಅನ್ನುವದನ್ನು ಹೇಳಬಹುದೇ

ಹೊರತು ಅವರೇ ಅದನ್ನು ಮಾಡಲಾರರು. ಸೃಷ್ಟಿಪ್ರಕ್ರಿಯೆಯಷ್ಟು ಪ್ರಜ್ಞೆಯ ನೆಲೆಯಲ್ಲಿ ನಡೆಯುವಂತಹದಲ್ಲ. ಅದರಲ್ಲಿ ತರ್ಕಕ್ಕೊಗ್ಗದ ಅಂಶವೊಂದಿದೆಯೆಂದು ಯಶವಂತರೇ ಹೇಳಿರುವದರಿಂದ ನನ್ನ ಟಿಪ್ಪಣಿಯ ಮಾತುಗಳು ಅವರಿಗೆ ಹಿಡಿಸಬಹು ದೆಂಬ ಭರವಸೆ ನನಗಿದೆ.

ತಮ್ಮ ಸೃಷ್ಟಿಪ್ರಕ್ರಿಯೆಯ ಬಗ್ಗೆ ಅವರು ಮಾತಾಡುವುದಕ್ಕೆ ಯಶವಂತರಿಗಿ ರುವ ಹಕ್ಕನ್ನು ನಾನು ಪ್ರಶ್ನಿಸುತ್ತಿಲ್ಲವೆಂದು ಹೇಳಬೇಕೇ ?

## ನಗರಿಯ ಸುತ್ತ

ಈ ನಗರದ ಭವ್ಯ ಸ್ವರ್ಗಲೋಕದಂತಹ
ಪಂಚತಾರಾ ಹೋಟಲುಗಳು ಕಾಮಿನಿ-ಕಾಮಧೇನುಗಳು
ಅರ್ಧ ನಗ್ನತೆಯ ರೋಮಾಂಚನಗಳ-ಸುತ್ತ
ಪಿರಿ ಪಿರಿ ಬೆಳಕು ಮತ್ತ ಗೆಜ್ಜೆ ದನಿಗಳ
ಕಿರಿ ಕಿರಿಯ ಗಲಬಿಲಿ.

ಈ ನಗರದ ಸೌಧಗಳ ಕೋಟೆಗಳಂತಹ
ಕೋಣೆಗಳಲ್ಲಿ ದಾಸ್ತಾನು–ಮಾರಾಟಗಳ
ಕಳ್ಳಮಳಿಗೆಗಳು. ಹಾಸಿಗೆಯಾಗುವ ನೋವಿನ
ದನಿಗಳು–ಅವುಗಳನ್ನೆಲ್ಲಾ ಅಡಗಿಸಿ ಬಿಡುವ
ರಕ್ತ ಪಿಪಾಸು ದನಿಗಳ ದಾಹ.

ಈ ನಗರದ ಸುತ್ತ ಕಾಣದು ವಿಶಾಲ
ನೀಲಾಕಾಶ, ಸ್ವಚ್ಛಗಾಳಿ, ಬೆಳಕು
ಎತ್ತರದ ಕಾಂಪೌಂಡು ಗೋಡೆಗಳ ಬೇಲಿ
ಕಟ್ಟಿ ಹಾಕಿದೆ ಈ ನಿಸರ್ಗದತ್ತ ಕೊಡುಗೆಗಳ
ಆದರೆ ಮಾರಾಟದಲ್ಲಿ ದೊರಕುತ್ತವೆ ಇವುಗಳೆಲ್ಲಾ

---

ಎಸ್. ಎ. ಜಯರಾಮ ಸರಳೆಬೆಟ್ಟ ಮಣಿಪಾಲ-576119 ದ. ಕನ್ನಡ

ಈ ನಗರದ ಸುತ್ತ–ಕಾಲೇಜು ಕಾರಿಡಾರುಗಳ,
ಲೇಡೀಸ್ ಹಾಸ್ಟೆಲುಗಳ, ಪಾರ್ಕುಗಳ ಜನಜಂಗುಳಿಯಲ್ಲಿ
ಅಲೆಮಾರಿ ಛಾಯಾಗ್ರಾಹಕ, ವಿಜ್ಞಾನದ
ವಿದ್ಯಾರ್ಥಿಗಳು ಸಿಗಿದ ಕಪ್ಪೆ ಮತ್ತಿತರ ಪ್ರಾಣಿಗಳ
ಉಸಿರುಗಳು ಜಡ್ಡು ಕಟ್ಟಿ ಸಂವೇದನೆಗಳ ಸಂಹರಿಸಿ,

ಈ ನಗರದ ಸುತ್ತಾ ಸಂಚರಿಸುತ್ತಾ, ಆಗಾಗ
ರಕ್ತ ಪ್ರೀತಿಸುವ ವಾಹನಗಳ, ಕಪ್ಪು ಹೊಗೆ
ಹಲವು ಬದುಕುಗಳ ನಡುವೆ ಶೂನ್ಯ ಮತ್ತು
ಸಂಪರ್ಕಗಳೆರಡನ್ನ ಸೃಷ್ಟಿಸುತ್ತಾ
ಧಾವಿಸುವ 'ಕಾಲ'ನ ಸುತ್ತಾ.

ಈ ನಗರ ಹೆಣೆದ ಬುಟ್ಟಿಯಾಗಿ
ನೀರಿಲ್ಲದ ಮರುಭೂಮಿಯಾಗಿ
ಸತ್ತ ಹಾವಾಗಿ
ಗುಳಿಬಿದ್ದ ಹೈವೇಯಾಗಿ, ಮಲಗಿದೆ
ಆದರೂ ಬೆಳೆಯುತ್ತಿದೆ ಹೊಲಸಗಳ, ಸುಸಿಗಳ

—ಮೂಲವಾಗಿ

—ಎಸ್. ಎ. ಜಯರಾಮ

---

"ಕಾಫಿಯಂಗಡಿ ಕೆಳಗೆ
ಧಾವಿಸುವ ಕೊಚ್ಚೆ ಹೆಜ್ಜೆಗಳ ರಸ್ತೆ
ಮೇಲೆತ್ತಿ ಹಿಡಿದು ಕಳ್ಳಿನ ಹಳಸುನಾತಕ್ಕೆ
ಎಚ್ಚೆತ್ತ ಬೆಳಗು. ಅನುದಿನದ ಬದುಕು
ತೊಡುವ ಮೊಗವಾಡಗಳ ಒತ್ತಟ್ಟಿಗೇ
ನೂರು ಕೋಣೆಗಳ ಮಾಸಿ ಕಪ್ಪಾದ ಕಿಟಕಿ ತೆರೆಗಳ ಕಡೆಗೆ
ಸರಿಯುವ ನೂರು ಕೈಗಳ ನೆನಪು."

—ಟಿ. ಎಸ್. ಎಲಿಯಟ್

(ರಾಮಚಂದ್ರಶರ್ಮರ ಈ ಶತಮಾನದ ನೂರು ಇಂಗ್ಲಿಷ್ ಕವನಗಳು)

## ಇತಿಹಾಸದುದ್ದಕ್ಕೂ......?

ಮನಸು ಅತ್ತಿಯ ಹಣ್ಣು
ಮುಲುಗುಡುವ ಚಿಂತೆಗಳ
ಗೆದ್ದಲ ಸಂಸಾರ
ಈ ದಿನಚರಿ !
ಆದಿ, ಅಂತ್ಯಕ್ಕೂ ಕಜ್ಜಲದ
ಪುಟಗಳಲಿ, ಅಲ್ಲಲ್ಲಿ
ರಕ್ತದ ಕಲೆಗಳು !
ಚೂರಿ, ಇರಿತಗಳು
ಅತ್ಯಾಚಾರ, ಸುಲಿಗೆಗಳು
ಮೌನ ನಿಟ್ಟುಸಿರ, ಸರ್ಪಗಳು
ರೋಪಗೊಂಡಿವೆ.
ಆಹುತಿಗೆ ಹಾತೊರೆಸಿವೆ !
'ಮನು' ಗೆರೆಯು
ಭೀಕರತೆ ಕಣ್ಣ ಚುಚ್ಚುತಿದೆ.
ಅಸಾಯಕತೆ, ಬಿಕ್ಕುತಿದೆ.
ಕೆನ್ನಾಲಿಗೆಗಳು. ಹೊರಚಾಚಿವೆ.
ತೀರದ ದಾಹದಲಿ.
ಬಸವಳದಿವೆ !
ನೆತ್ತರ ನೀರಲ್ಲಿ-
ಚಿಗುರೊಡೆದ ಕನಸುಗಳು
ಬಯಕೆಗಳು, ಆರ್ಭಟದಲಿ
ಕೊನೆಯಾಗುತಿವೆ !
ಅಡಿ ಇಟ್ಟೆಡೆಯೆಲ್ಲಾ ಕೊಚ್ಚೆ
ರೊಚ್ಚಿನ ತಾಣ !
ನೋಟ ಹರಿಸಿದುದ್ದಕ್ಕೂ 'ಶೂನ್ಯತೆ'ಯ
ಸ್ಥಿರ ಚಿತ್ರಣ !?

—ಬಿ. ಸಿ. ಶೈಲ

ಬಿ. ಸಿ. ಶೈಲ, 'ಪ್ರಶಾಂತ ನಿಲಯ' ರೈಲ್ವೆ ಹಳಿ ಪಕ್ಕ, ಎಸ್.ಐ.ಟಿ. ಬಡಾವಣೆ, ತುಮಕೂರು-3

# ಹೊಸ ಧರ್ಮ ಪಂಥಗಳು ಮತ್ತು ಕ್ರಾಂತಿ

—ಗೌರೀಶ ಕಾಯ್ಕಿಣಿ

ಪ್ರಾಚೀನ ಅಥವಾ ಮಧ್ಯಯುಗದ ಸಾಮಾಜಿಕ ಧಾರ್ಮಿಕ ಸ್ವರೂಪದ ಆಂದೋಲನಗಳಲ್ಲಿ ವರ್ಗಕಲಹದ ಮೆಕ್ಯಾನಿಕ್ಸ್ ಅಥವಾ ವಿರೋಧ ವಿಕಾಸದ ಡೈನಾಮಿಕ್ಸ್ ಕಾಣುವವರು, ಹುಡುಕುವವರೂ ಅಭಾವಿತವಾಗಿಯೇ ಒಂದು ರೀತಿಯ ತಪ್ಪು ಮಾಡುತ್ತಾರೆಂದು ನನ್ನ ಭಾವನೆ. ಆದಿಕ್ರೈಸ್ತ ಧರ್ಮದ ಉತ್ಥಾನ, ಮಹಮ್ಮದ ಪೈಗಂಬರನ ಹೊಸ ಧರ್ಮದ ಸ್ಥಾಪನೆ, ಅತಿಪ್ರಾಚೀನ ಬೌದ್ಧ ಧರ್ಮಗಳ ಉಗಮ ಮತ್ತು ವಿಕಾಸ, ಈಚಿನ ಗುರುನಾನಕರ ವೀರ ಹಿಂದೂ ಪಂಥ. ಪಶ್ಚಿಮದಲ್ಲಿ ಮಾರ್ಟಿನ್ ಲೂಥರನು ಕ್ಯಾಥೋಲಿಕ್ ಧರ್ಮದ ವಿರುದ್ಧ ಎಬ್ಬಿಸಿದ ಪ್ರೊಟೆಸ್ಟಂಟ್ ಪ್ರತಿಭಟನೆ. ಅದರ ಪ್ರತಿಧ್ವನಿಗಳೇ ಅನಿಸಿದ ಪ್ರೆಸ್ಬಿಟೇರಿಯನ್, ಜೇಸು ವೈತ ಮುಂತಾದ ಧರ್ಮ ಪಂಥಗಳ ಪ್ರಸಾರ, ಹಾಗೆಯೇ ನಮ್ಮಲ್ಲಿ ಲಿಂಗಾಯಿತ, ವೈಷ್ಣವ ಭಕ್ತಿ ಪಂಥ, ವಿಠ್ಠಲ ಸಂಪ್ರದಾಯ-ಇವೆಲ್ಲ ಆಂದೋಲನಗಳ ಸಾಧಾರಣ ಲಕ್ಷಣವೆಂದರೆ, ಜನತೆಯ ವಿಭಿನ್ನ ಸಾಮಾಜಿಕ ಸ್ತರಗಳ ಬಹುಜನ ಸಮುದಾಯ ಹೆಚ್ಚುಹೆಚ್ಚಾಗಿ ಸೇರಿ ಈ ಪಂಥಗಳ ಸೆಳವು ಗಾತ್ರ-ಪಾತ್ರಗಳಲ್ಲಿ ಬಲವಾಗಿ ಬೆಳೆಯುತ್ತಲೇ ಹೋದದ್ದು.

ಇದರ ಎರಡು ಉಪಲಕ್ಷಣಗಳೆಂದರೆ : ೧. ಈ ಜನ ಸಮುದಾಯ ಹೆಚ್ಚಾಗಿ ಸಮಾಜದ ಕೆಳ ಜಾತಿ (ವರ್ಗ)ಗಳಿಂದಲೇ ತುಂಬಿಕೊಂಡಿದ್ದು. ೨. ಪ್ರತಿಷ್ಠಿತ ಪರಂಪರಾಗತ ಧರ್ಮಸಂಸ್ಥೆಗೆ ಅವರ ಕರ್ಮಕಾಂಡಕ್ಕೆ ಪ್ರತಿಯಾಗಿ ಸಾದಾ ಸರಳ ಭಜನೆ—ಉಪಾಸನೆಯ ಮಾರ್ಗವನ್ನು ಪುರಸ್ಕರಿಸಿದ್ದು. ಲೌಕಿಕ ಪಾತಳಿಯಲ್ಲಿ ಅಂದಿನ ಸನ್ನಿವೇಶದಲ್ಲಿ ಧರ್ಮವು ಅನಿವಾರ್ಯವಾಗಿ ಜಾತಿ ನಿಷ್ಠವಾಗಿತ್ತು. ಅದು ಶ್ರೇಣೀಬದ್ಧ ಸಮಾಜದ ಆಚಾರ ಸಂಹಿತೆಯಾಗಿತ್ತು. ಇಂದಿನ ಪರಿಭಾಷೆಯಲ್ಲಿ ಹೇಳುವ ವರ್ಗಗಳಂತೆ 'ಜಾತಿ'ಗಳೂ ಆಯಾ ಕಸುಬು ಕೈಗಾರಿಕೆ ಅಥವಾ ಉತ್ಪಾದನೆ—ಉದ್ದಿಮೆಯನ್ನು ಪ್ರತಿನಿಧಿಸುತ್ತಿತ್ತು. ಆದರೆ ಈ ಆರ್ಥಿಕ ವಿಭಜನೆಯ ವರ್ಗೀಕರಣದ

ಗೌರೀಶಕಾಯ್ಕಿಣಿ, ಗೋಕರ್ಣ, ಉತ್ತರ ಕನ್ನಡ.

ವ್ಯವಸ್ಥೆಯೇ ಜನ್ಮಸಿದ್ಧವಾಗಿ ಕುಲ ಧರ್ಮದ ಪರಂಪರಾಗತ ಬದುಕಾಗಿ 'ಜಾತಿ'ಯ ರೂಪದಲ್ಲಿ ಹೆಚ್ಚು ಗಟ್ಟಿಗೊಂಡಿತ್ತು. ಆದ್ದರಿಂದಲೇ ಅಂದಿನ ಈ ಧರ್ಮ ಪಂಥಗಳ ಕುಟುಂಬಗಳೇ ಘಟಕಗಳಾಗಿ ಮಾರ್ಪಟ್ಟು ಜಾತಿನಿಷ್ಠ ಶ್ರೇಣೀಬದ್ಧ ಸಮಾಜವಾಗಿತ್ತು ಎಂಬುದನ್ನು ನಾವು ಗಮನಿಸಬೇಕು. ಇಂಥ ವಾತಾವರಣ ಮತ್ತು ಪರಿಸರ ಇಂದು ನಾವು ಅರ್ಥೈಸಿಕೊಳ್ಳುವಂಥ ವರ್ಗಕಲಹಕ್ಕೆ ದ್ಯೋತಕವೂ ಅಲ್ಲ, ಪೋಷಕವೂ ಅಲ್ಲ.

ಆದರೂ ತತ್ವಶಃ ಇವೆಲ್ಲ ಪಂಥಗಳ ಆದೇಶ-ಉಪದೇಶ ಒಂದು ಭಾವನಾತ್ಮಕ ಸಾಮ್ಯವಾದದ್ದಾಗಿತ್ತು. 'ಸ್ವಾಮಿ' ಒಬ್ಬ ದೇವರು. ಜೀವಜಂತು ಜನಗಳೆಲ್ಲ ದೇವರ ಮಕ್ಕಳು, ಎಲ್ಲರೂ ಸರಿಸಮಾನ ಎಂಬ ಭೂಮಿಕೆಯಲ್ಲಿ ಆ ಭರ್ತಾರನ ಭೃತ್ಯರೂಪ ನಾವೆಲ್ಲರೂ ನಮ್ಮೊಳಗಿನ ಭೇದಭಾವ ತಾರತಮ್ಯಗಳನ್ನು ಮರೆಯುವುದು. ಮನ್ನಿಸದೆ ಒಂದಾಗಿ ನಡೆಯುವುದು. ಇದು ವಸ್ತುತಃ ಪ್ರತ್ಯಕ್ಷವಲ್ಲದಿದ್ದರೂ ಪರ್ಯಾಯವಾಗಿ ಸ್ಥಾಪಿತ ಧರ್ಮ ವ್ಯವಸ್ಥೆಯ ಸ್ವಾಮಿಪ್ಯವನ್ನು ಅಲ್ಲಗಳೆಯುವುದೇ ಆಗಿತ್ತು. ಈ ನಿರಾಶೆಗಳಿಗೆ ಸಂಪ್ರದಾಯದ ಹುತ್ತ-ಗುತ್ತಗಳಾದ ಗುಡಿ ಗುಡಾರಗಳ, ಮಠಮಾನ್ಯಗಳ ಬಗೆಗೆ ಹೀಗಳಿಕೆ - ಮೂದಲಿಕೆಗಳಲ್ಲಿ ಈ ಹೊಸ ಪಾಂಥಿಕರು ವ್ಯಕ್ತಪಡಿಸುತ್ತಲೇ ಇರುತ್ತಿದ್ದರು.

ಹೀಗೆ ಪಟ್ಟಭದ್ರ ಹಿತಾಸಕ್ತಿಗಳ ಸಂಘಟನೆಯಾದ ಪ್ರತಿಷ್ಟಿತ ಧರ್ಮಸಂಸ್ಥೆಯ ವಿರುದ್ಧ, ಸಾಮಾಜಿಕ ವ್ಯವಸ್ಥೆಯ ವಿರುದ್ಧ ಇದು ಅಂದಿನ ಜನತೆಯ ಮೂಕ, ಮುಗ್ಧ ಪ್ರತಿಕ್ರಿಯೆ. ಅಂದರೆ ಭಾವನಾತ್ಮಕ ಬಂಡಾಯವೇ ಆಗಿತ್ತು. ವ್ಯಾಪಕವಾಗಿ, ಮೂಲಭೂತವಾಗಿ ಇದೊಂದು ವಿಮೋಚನೆಯ ಆಂದೋಲನವೇ ಆಗಿತ್ತು. ದೇಗುಲದ ಪೂಜಾರಿ ಸಮಾಜದ ಪುರೋಹಿತ, ಮಹಂತ, ಮಂತ್ರಿ-ತಂತ್ರಿ ಇವರೆಲ್ಲರ ಬೆಂಬಲಕ್ಕೆ ನಿಂತ ಅಳರಸರು, ಅವರ ಊಳಿಗ ಮಾತ್ರದವರು ಈ ವ್ಯೂಹವನ್ನೇ ವಿಚಾರದಲ್ಲಿ ಒಪ್ಪದ ಆಚಾರದಲ್ಲಿ ಅಲ್ಲಗಳೆಯುವ ಒಂದು ಬಗೆಯ ತೀವ್ರ ಬಂಡುಗಾರಿಕೆಯೇ (ಸವಿನಯ ಅಸಹಕಾರದಂತೆ) ಈ ಪಂಥಗಳ ಹೊಸ ಧರ್ಮ ದೀಕ್ಷೆಗಳ ಸತ್ಯವಾಗಿತ್ತು.

ಆದ್ದರಿಂದಲೇ ನುಣ್ಣಗೆ ಹಬ್ಬುತ್ತ ಹೋದ ಈ ಪಂಥಗಳನ್ನು ಧಾರ್ಮಿಕ ಆಂದೋಲನಗಳನ್ನು ಒಂದು ಘಟ್ಟದಲ್ಲಿ ಆಯಾ ದೇಶದ ಅಳರಸರು ತಮ್ಮ ಸತ್ತೆಗೆ ಅವರ ಕುರಿತ ಪ್ರಜೆಯ ನಿಷ್ಠೆಗೆ ಆಹ್ವಾನವೆಂದೇ ಎಣಿಸಹತ್ತಿ ಮುಖಾಮುಖಿಯಾಗಿ ನಿಂತರು. ರೋಮನ ಚಕ್ರವರ್ತಿಯಾಗಲಿ, ಯಹೂದ್ಯರ ಶ್ರೇಷ್ಠಿಗಳಾಗಲಿ, ನಮ್ಮಲ್ಲಿಯ ಬೌದ್ಧ ಜೈನಮತಗಳ ಪ್ರಾಬಲ್ಯವನ್ನು ಕುಗ್ಗಿಸಿದ ಕರಗಿಸಿದ ಹಿಂದೂರಾಜರಾಗಲಿ, ಬಿಜ್ಜಳ ಭೂಪತಿಯೇ ಆಗಲಿ, ಪ್ರತಿಯೊಂದು ಯುಗದಲ್ಲಿ ಈ ಜನಾಭಿಮುಖ

ಬಹು ಜನಪ್ರಿಯ ಭಾವಾವೇಶದ ಚಳವಳಿಯನ್ನು ಯಥಾಸ್ಥಿತಿ, ಪ್ರತಿಷ್ಠಿತ ವ್ಯವಸ್ಥೆಗೆ ತಮ್ಮ ಪಟ್ಟಭದ್ರ ಹಿತಾಶಕ್ತಿಗೆ (ಅಂದರೆ ಆ ಮೂಲಕ ಸಾಗ ಬೇಕಾದ ಜನತೆಯ ನಿರಾತಂಕ ಶೋಷಣೆಗೆ ಕುಠಾರ ಪ್ರಾಯವೆಂದು ಮನಗಂಡು ರಾಜಕೀಯ ಧಾರ್ಮಿಕ ಮುಖವುಳ್ಳ ಅಂದಿನ ಶಾಸನಸತ್ತೆಯು ಈ ಹೊಸ ಪಂಥಗಳನ್ನು ತಲೆಯೆತ್ತದಂತೆ ಸದೆ ಬಡಿಯಲು ಪಣತೊಟ್ಟಿದ್ದು ಪ್ರಪಂಚದ ಇತಿಹಾಸದಲ್ಲಿ ಕಾಣುತ್ತೇವೆ. XXX I ಕ್ರಿಸ್ತನು ದೇವರ ರಾಜ್ಯದ ಪ್ರಚಾರ ಮಾಡಿದ್ದು ರೋಮನ್ ಸಾಮ್ರಾಜ್ಯಕ್ಕೆ ಪ್ರತಿಭಟನೆಯೆಂದು ದೂರದ ರೋಮನ್ ಚಕ್ರವರ್ತಿಯೂ ಹತ್ತಿರದ ಯಹೂದೀ ಶ್ರೇಷ್ಠಗಳು ಹೆದರಿದರು. ಆದರೆ ಹೀಗೆಂದಮಾತ್ರಕ್ಕೆ ಯೇಸುಕ್ರಿಸ್ತ ಅಂಥ ರಾಜ್ಯ ಕ್ರಾಂತಿಯನ್ನು ಹೂಡಲು ಹೊರಟಿದ್ದನಂತಲ್ಲ 'ಅಂದಿನ ಸಮಾಜದ ತಳಹದಿಯ ವರ್ಗ ವ್ಯವಸ್ಥೆಯನ್ನು ಅದರ ಶೋಷಿತ-ಶೋಷಿತರ ಅನ್ಯೋನ್ಯ ಸಂಬಂಧಗಳನ್ನು ಬದಲಿಸುವ ದಾಗಲಿ, ಬುಡಮೇಲೆ ಮಾಡುವುದಾಗಲಿ ಕ್ರಿಸ್ತನ ಉದ್ದೇಶವಿದ್ದಿಲ್ಲ. 'ಸೀಝುರನಿಗೆ ಸಲ್ಲತಕ್ಕದನ್ನು ಸೀಝುರನಿಗೆ ಸಲ್ಲಿಸಿರಿ; ದೇವರಿಗೆ ಸಲ್ಲತಕ್ಕದನ್ನು ದೇವರಿಗೆ ಸಲ್ಲಿಸಿರಿ.' ಕ್ರಿಸ್ತ ಅನ್ನುತ್ತಿದ್ದನು. 'ಸ್ವರ್ಗದ ರಾಜ್ಯವು ನಿಮ್ಮೊಳಗೆ ಇದೆ, (ಅದು ಹೊರಗೆ ಸ್ಥಾಪಿಸ ಬೇಕಾದ ವ್ಯವಸ್ಥೆ ಅಲ್ಲ) ಅನ್ನುತ್ತಿದ್ದನು. ಧನವಂತರ ಬಗೆಗೆ ಅವನಿಗೆ ತಿರಸ್ಕಾರ ವಿತ್ತು. ದೀನದಲಿತರ ಬಗ್ಗೆ ಅಪಾರ ಕರುಣೆಯಿತ್ತು ಎಂದು ಆತ ದಲಿತರನ್ನು ಬಡವ ರನ್ನು, ಧನಿಕರ ವಿರುದ್ಧ ಎತ್ತಿಗಟ್ಟಲಿಲ್ಲ. ಸೇಡು ನನಗೆ ಒಪ್ಪಿದ್ದು. ನಾನು ಮರಳಿ ತೆರುತ್ತೇನೆ!" "ಒಂದು ಗಲ್ಲಕ್ಕೆ ಹೊಡೆದರೆ ಇನ್ನೊಂದು ಗಲ್ಲವನ್ನು ಹೊರಳಿಸಿ ಕೊಡಿ" ಎಂದೆಲ್ಲ ಸಾರಿದ ಕ್ರಿಸ್ತ ಯಥಾಸ್ಥಿತಿಯಲ್ಲಿ ವಿಶೇಷ ಬದಲಾವಣೆ ಬಯಸಲಿಲ್ಲ. ಅವನ 'ಅಪೀಲು' ಮಾನವ್ಯ– ಬಾಂಧವ್ಯದ ಒಂದು ಭಾವನಾಮಯ ಸಮಾನತೆಯದಾಗಿತ್ತು. ಆದರೆ ಆಳರಸರಿಗೆ ಈ ಪರಿಕಲ್ಪನೆಯೇ ಅಸಹ್ಯವಾಯಿತು, ಅವರು ವರ್ಗಭೇದದ ಶ್ರೇಣಿಬದ್ಧ ತಾರತಮ್ಯಕ್ಕೆ ಬದ್ಧರು. ಶಾಸಕxಶಾಸಿತ, ಬಡವxಬಲ್ಲಿದ, ಒಡೆಯx ಗುಲಾಮ ಈ ವೈಷಮ್ಯಗಳಲ್ಲಿ ಭದ್ರ ಬೇರೂರಿ ನಿಂತಿತ್ತು-ಅವರ ಸತ್ತೆಯ ಪಿರಾ ಮಿಡ್ಡು.

ಕ್ರಿಸ್ತನಿಗೂ ಹಿಂದೆ ಗೌತಮ ಬುದ್ಧನೀನು ವರ್ಧಮಾನ ಮಹಾವೀರನೀನು ಪ್ರಾಮಾಣಿಕವಾಗಿಯೂ ನೈತಿಕಸತ್ಯದ ಶೋಧನೆ ಆ ಮೂಲಕ ವ್ಯಕ್ತಿಶಃ ಜನರಶೀಲ ಪರಿವರ್ತನೆ ತಮ್ಮ ಸಾಧನೆಯನ್ನಾಗಿ ಮಾಡಿಕೊಂಡಿದ್ದರು. ತಮ್ಮ ಮಟ್ಟಿಗೆ ಅವರು ವ್ಯವಸ್ಥೆಯಿಂದ ಸಿಡಿದೆದ್ದು ಹೊರಬಂದವರು ನಿಜ, ಆದರೂ ವಸ್ತುತಃ ಪೂರ್ತಿ ವರ್ಗಾತೀತ (declass) ಆಗಲಿಲ್ಲ. ಅವರ ಅನುಯಾಯಿಗಳೂ ಅವರನ್ನು ಪೂರ್ತಿ ಹಾಗೆ ತಮ್ಮಲ್ಲಿ ಒಬ್ಬರಾಗಿ ಕಾಣಲಿಲ್ಲ. (ಬುದ್ಧನು ತನ್ನನ್ನು 'ತಥಾಗತ'ನೆಂದು ಕರೆದು ಕೊಂಡನು, ಆದರೆ ಬುದ್ಧ ಸಂಘ ಅವನನ್ನು 'ಬುದ್ಧಭಗವಾನ'ನೆಂದೇ ಗುರುತಿಸಿತ್ತು.)

ಜೈನ ಬೌದ್ಧ ಪಂಥಗಳು ಅಂದಿನ ವೈದಿಕ ಸಂಪ್ರದಾಯದ ಯಜ್ಞಸಂಸ್ಥೆಯ, ವರ್ಣ ವ್ಯವಸ್ಥೆಯ, ಆ ಮೂಲಕ ಹುಟ್ಟಿದ ಸಾಮೂಹಿಕ ದುಃಖದ ಸಮಸ್ಯೆಗೆ ಪರಿಹಾರ ಹುಡುಕಿದರು. ಅಂಥ ವ್ಯವಸ್ಥೆಯಲ್ಲಿ ತೊತ್ತುಳಿಗೊಂಡ ಬಹು ಜನಸಮುದಾಯ ಅವರಿಗೆ ಓಗೊಟ್ಟು ಅನುಸರಿಸಿತು. ಆದರೆ ಅವರು ವರ್ಣಭೇದ, ವೃತ್ತಿಭೇದಗಳ ಉಚ್ಚಾಟನೆಗೆ ಹೊರಟವರಲ್ಲಿ ಹೋರಾಡಿದವರೂ ಅಲ್ಲ. ಈ ಪಂಥಾನುಯಾಯಿಗಳ ಪ್ರಪಂಚದಲ್ಲಿ ಆಂತರಿಕವಾಗಿ ವೈಷಮ್ಯ ತಾರತಮ್ಯಗಳಿದ್ದಿಲ್ಲ. ಎಲ್ಲರೂ ಸಂಗಮಗಳಲ್ಲಿ ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದರು. ಯಾವ ಖಾಸಗಿ ಸೊತ್ತು ಉಳ್ಳವರಾಗಿದ್ದಿಲ್ಲ. ಆದರೆ ಇಂಥ ಭಿಕ್ಷು ಸಂಘಗಳನ್ನು ಪೋಷಿಸಲಿಕ್ಕೆ ಉಳ್ಳವರ ದತ್ತಿದಾನ, ಉದಾರಾಶ್ರಯಗಳು ಅವಶ್ಯವಿತ್ತು. ಅದಕ್ಕಾಗಿ ಅಂಥ ಧನಿಕವರ್ಗಗಳೂ ಊರ್ಜಿತವಿರಬೇಕಿತ್ತು.

ಆದಾಗ್ಯೂ "ಬಹುಜನ ಸುಖಾಯ, ಬಹುಜನ ಹಿತಾಯ" ಒಂದು ಭಾವನಿಕ ಹಾಗೂ ನೈತಿಕ ಪಾತಳಿಯ ಸಾಮ್ಯದ 'ಸಮ್ಯಕ್' ಮಾರ್ಗವನ್ನು ಕಾಣಿಸಲು ಈ ಧರ್ಮಸಂಸ್ಥಾಪಕರು ಹೊರಟರು. ಅಂಥಾ ಸುಖಾಪೇಕ್ಷೆಯಿಂದ ಜನಸಾಮುದಾಯ ಅದರತ್ತ ಆಕರ್ಷಿತವಾಯಿತು. ಆ ಮಟ್ಟಿಗೆ ಆ ಜನ ವ್ಯವಸ್ಥೆಯಿಂದ ದೂರಸರಿದಂತೆ ಆಯಿತು. ವ್ಯವಸ್ಥೆಯ ನೆರಳಿನಲ್ಲಿಯೇ ಅದರ ಕಹಿಯನ್ನು ತಪ್ಪಿಸಿಕೊಂಡು ತಂಪಿನಲ್ಲಿ ಬದುಕುವ ಒಂದು ಪ್ರಯೋಗ ನಡೆಯಿತು, ಹೊರತು ಬುದ್ಧನಾಗಲಿ, ಮಹಾವೀರನಾಗಲಿ, ನಾವು ಇಂದು ಮಾರ್ಕ್ಸ್‌ನಿಂದ ಕಲಿತುಕೊಂಡ ವಿಶಿಷ್ಟ ಅರ್ಥದಲ್ಲಿ ಕ್ರಾಂತಿಕಾರಿಗಳಾಗಲಿಲ್ಲ. ಅದು ಅವರ ಉದ್ದೇಶವೂ ಆಗಿದ್ದಿಲ್ಲ. ಅವರ ಅನುಯಾಯಿಗಳು ಸಾಧಿಸಿದ್ದೇನು ? ಒಂದು ಪಲಾಯನವಾದ. ಗುಹಾಲಯ, ಚೈತ್ಯಾಲಯಗಳಲ್ಲಿ, ವಿಹಾರಗಳಲ್ಲಿ ಭಿಕ್ಷುಗಳಾಗಿಯೋ, ಶ್ರಮಿಕರಾಗಿಯೋ ಲೌಕಿಕ ಸಮಾಜ ಜೀವನಕ್ಕೆ ಬೆನ್ನು ತಿರುವಿ ಅಂತರ್ಮುಖಿಗಳಾಗಿ ಉದರನಿರ್ವಾಹ ಮಾಡಿದರು. ಈ ಬಗೆಯ ಮುನಿವರ್ಗ, ಯತಿಪಂಥ ನಮ್ಮಲ್ಲಿ ವೇದ ಪೂರ್ವ ಕಾಲದಿಂದಲೂ ಇತ್ತು. ಉಪನಿಷತ್ತುಗಳು ಬಣ್ಣಿಸುವಂತೆ ದಾರ್ವೇಷಣೇ ಲೋಕೈಷಣೇ ಉತ್ತೈಷಣೆಗಳನ್ನು ತೊರೆದು "ಭೈಕ್ಷಾಚರ್ಯಂ ಚರಂತಿ" ಎಂಬ ಅನಿಕೇತನ ಪರಿವ್ರಾಜಕ ಬದುಕನ್ನು ಬಾಳುವ ಒಂದು ಅಲ್ಪ ಸಂಖ್ಯೆ ಗುಂಪು (ಆ ಕಾಲದ ಹಿಪ್ಪಿಗಳೆನ್ನಿ !) ಎಂದಿನಿಂದಲೂ ಇದ್ದೇ ಇತ್ತು. ಅದೀಗ ಹೊಸ ಹೆಸರು ಪಡೆದು ಬಹುಸಂಖ್ಯೆವಾಯಿತು.

ಕ್ರೈಸ್ತರಂತೆ ಈ ಹೊಸ ಧರ್ಮದವರೂ ತಮ್ಮದೇ ಆದ ಹೊಸ ಸಂಘಟನೆ, ಸಂಪ್ರದಾಯ ಶ್ರೇಣಿಬದ್ಧ ವ್ಯವಸ್ಥೆ ಅದರ ಪರಂಪರೆ ಕುದುಕೊಂಡರು. ಮೂಲವ ಆಳಿದ ಹಿಂದೂ ಧರ್ಮ ಸಂಸ್ಕೃತಿಯೂ ಮುಂದೆ ಮೇಲುಗೈ ಆಗಿ ತನ್ನ ಉದಕದಲ್ಲಿಯೇ ಈ ಹೊಸ ಪಂಥಗಳನ್ನು ಹೊಯ್ದು ಹೊಂದಿಸಿ 'ಸನಾತನ'ವೆಂಬ ಧರ್ಮದ

ಸ ಧಾರಿಸಿನ "ಪರಿಷ್ಕೃತ (?) ಪರಿವರ್ಧಿತ" ಆವೃತ್ತಿಯು ಹೊರ ಬಂತು ! ಹಳೆಯದೇ ಹೊಸತಾಗಿ ರೂಪಾಂತರಗೊಂಡಿತು. ಅಂತೆಯೇ ಅದು ಸನಾತನ.

XXXIII ಅದೇ ಕಥೆ ವೀರಶೈವ ಮತದ್ದು ಆಯಿತು. ಬಸವಣ್ಣ "ಅನುಭವ ಮಂಟಪ"ವನ್ನು ಸಂಘಟಿಸಿ ಅದರಲ್ಲಿ 'ಶೂನ್ಯಸಿಂಹಾಸನದಡಿಯಲ್ಲಿ ಎಲ್ಲ ಶಿವಶರಣರ ಒಂದೇ ಕುಲವೆಂದು ಸಾರಿ ಹಾಗೆ ತಾನೂ ನಡೆದು ನಡೆಯಿಸಿ ತೋರಿಸಿದರೂ ಬ್ರಾಹ್ಮಣರಿಂದ ಅತಿ ಶೂದ್ರ (ಶ್ವಪಚ) ರವರೆಗೆ ಎಲ್ಲರೂ ಶಿವಲೆಂಕರೆಂಬ ಒಂದು ಉನ್ನತ ಉತ್ಕಟ ಭಾವೈಕ್ಯವನ್ನು ಸಾಧಿಸಿದರು. ಇದು ಭಾವನಾತ್ಮಕ ಸಮಾನತೆಯ ಬಾಂಧವ್ಯದ ಒಡನಾಟದ ಕತೆ ಆಯಿತು. ಇಲ್ಲಿ ಸಮಾಜ ಸಂಘಟನೆಯ ಒಳಹಂದರವಾದ ಆರ್ಥಿಕ ವರ್ಗ ಭೇದದ ಪೈಪೋಟಿ. ಒಳತೋಟಿಗಳ ಉಚ್ಚಾಟನೆಯ ಕನಸನ್ನು ಬಸವಾದಿ ಶಿವಶರಣರು ಕಂಡಿದ್ದಿಲ್ಲ. ಜೀವವು ಶಿವನೊಂದಿಗೆ ನೇರ 'ಆಂತರಿಕ ಐಕ್ಯಭಾವವನ್ನು ಸ್ಥಾಪಿಸಿ ಅಂಥವರೆಲ್ಲ ಆ ಪಾತಳಿಯಲ್ಲಿ ಒಂದೆಂಬ ಅನುಭವದಲ್ಲಿ ಪಾಲುಗೊಳ್ಳುವುದೇ ಅವರ ಗುರಿಯಾಗಿತ್ತು. ಲಿಂಗದೀಕ್ಷೆ ಹೊಂದಿದವರೆಲ್ಲ ಈ ಭಕ್ತಿ ಮಾರ್ಗದ ಯಾತ್ರೆಯಲ್ಲಿ ಸಂಗಾತಿಗಳು, ಅವರವರ ವೃತ್ತಿ ಉಪಜೀವಿಕ ಅವರವರ 'ಕಾಯಕ' ಅಷ್ಟೇ ಪವಿತ್ರ ಶಿವಾರ್ಪಣಭಾವದ ಧರ್ಮಕೃತ್ಯ ಈ ಭಾವನೆಯಲ್ಲಿ ಉಚ್ಚ ನೀಚ ಭೇದವಿಲ್ಲ. (ಈ ಕುಲಕಸಬಿನ ದೈವೀಕರಣದಿಂದ ಶೋಷಿತನ ಜೀತದಷ್ಟೇ ಶೋಷಕನ ಬಲಾತ್ಕಾರ ದೇವರ ಕೆಲಸ-'ಕಾಯಕ') ಈ ಒಂದು ದೃಷ್ಟಿಯಿಂದ ನೋಡಲು ಕಲಿಸಿ ಬಸವಣ್ಣನವರು 'ಕಾಯಕ'ದಿಂದ ಒಂದು ರೀತಿ ಬಡದುಡಿಮೆಗಾರರಲ್ಲಿ ಸ್ವಾಭಿಮಾನ ತನ್ನ ಕಸಬಿನ ಕುರಿತು ಕೀಳರಿಮೆ ಉಳಿಯದ ಗೌರವ ಪ್ರವೃತ್ತಿ ಮೂಡಿಸಿದರು, ಆದರೆ ಜತೆಗೆ ಈ ದೃಷ್ಟಿಯನ್ನು, ಈ ಶ್ರಮಶೋಷಣೆಯ ಸಾಮಾಜಿಕ ಅನ್ಯಾಯದ ಅಸಹ್ಯದಿಂದ ಕಿತ್ತು ("ಅನ್ಯರೊಳು ಅಸಹ್ಯಪಡಬೇಡ !) ಕರಲಿಂಗಪೂಜೆಯಲ್ಲಿ ಪರಶಿವನಲ್ಲಿನಟ್ಟು 'ಇಲ್ಲಿ'ಯ ವರ್ಗ ಕಲಹದ ತೀವ್ರತೆಯನ್ನು ವೈಷಮ್ಯ ಜನ್ಯ ದ್ವೇಷದ ತೀಕ್ಷ್ಣತೆಯನ್ನು ಭಕ್ತಿಯ ಭಾವಾವೇಶದಲ್ಲಿ ಮರೆಯುವಂತೆಯೂ ಮಾಡಿದರು. ಅಂದರೆ ಬಿಜ್ಜಳನ ಭಂಡಾರದ ಆಧಿಪತ್ಯ ವಹಿಸಿದ ಈ ಮಂತ್ರಿ ಹೇತುಪೂರ್ವಕ ಬೂಟಾಟಿಕೆ ನಡೆಸಿದರೆಂದಲ್ಲ. ಬಸವಣ್ಣನವರ ಪ್ರಾಮಾಣಿಕತೆಯ ಹಾಗೂ ಭಕ್ತಿಭಾವದ ಬಗೆಗೆ ಈ ಸಂದೇಹವೇ ಇಲ್ಲ. ಆದರೆ ಅವರ ಪ್ರವರ್ತನೆಗೊಳಿಸಿದ ಹೊಸ ಭಕ್ತಿ ಪಂಥದ ಲೌಕಿಕ ಹಾಗೂ ವ್ಯಾವಹಾರಿಕ ಪರಿಣಾಮ ಈ ರೀತಿಯಾಯಿತು.

'ಕಾಯಕ'ದ ಪರಿಕಲ್ಪನೆಯಿಂದ ಆತ್ಮಗೌರವ ಆಧ್ಯಾತ್ಮಿಕ ಸಂತೃಪ್ತಿ ಇವೆಲ್ಲ subjective ಸತ್ಪರಿಣಾಮಗಳು, ಆದರ objective ಫಲವೇನು ? ಸ್ವಕರ್ಮವು

ಸ್ವಧರ್ಮ. ಆದರಲ್ಲಿ ಕೀಳು ಮೇಲೆಂಬುದಿಲ್ಲ. ಅಂದಾಗ ವೈಷಮ್ಯ ಒಂದು ಘೋರ ಅನ್ಯಾಯವೆನಿಸುವುದಿಲ್ಲ. ದೇವರು ಇಟ್ಟಲ್ಲಿ ಇಟ್ಟಂತೆ ಬಾಳುವುದು ಮುಖ್ಯ. 'ಅಲ್ಲಿ' 'ಸಲ್ಲ'ಲಿಕ್ಕೆ ಆದಾಗ್ಯೂ ಪ್ರತ್ಯಕ್ಷ ಸಾಮಾಜಿಕ ಪಾತಳಿಯಲ್ಲಿ ಅವರು ಜಾತಿ ಭೇದವನ್ನು ಅಳಿಸಲು ಹವಣಿಸಿದಾಗ (ಹರಳಯ್ಯ ಮಾದರಸರ ಶರೀರ ಸಂಬಂಧವ ಪ್ರಕರಣ) ಅಪ್ರತಿಲೋಮ ವಿವಾಹದ ಪ್ರಸಂಗದಿಂದ ಎದ್ದ ಸುಂದರ ಗಾಳಿಗೆ ಅನುಭವ ಮಂಟಪವೇ ಕುಸಿಯಿತು.

ತಾತ್ಪರ್ಯವೆಂದರೆ—ಕ್ರಿಸ್ತ, ಬುದ್ಧ, ಮಹಾವೀರರಂತೆ ಬಸವಣ್ಣನವರ ಆಂದೋಲನದ ಕ್ರಾಂತಿಗರ್ಭ ಸಾಧ್ಯತೆಗಳು ಏನೇ ಇದ್ದರೂ ಅವುಗಳನ್ನು ಕುಂಠಿತಗೊಳಿಸುವಂಥ ಜಾತಿನಿಷ್ಠ ಶ್ರೇಣಿಭದ್ಧ ಹಾಗೂ ಪಟ್ಟಭದ್ರ ವ್ಯವಸ್ಥೆಯ ಅಡ್ಡ-ಬಿದ್ದ ಸೆಳೆತ ಬಿಗಿತಗಳು ಅಷ್ಟೇ ಬಲಿಷ್ಠವಿದ್ದುವು. ಅವುಗಳ ಪಾವಮ್ಯವನ್ನು ಈ ಆಂದೋಲನಗಳಿಗೆ ಒಳಪಟ್ಟವರೂ ಅವುಗಳ ಪ್ರವರ್ತಕರೂ ಕೂಡಿಯೇ ತಾತ್ವಿಕವಾಗಿ ಒಪ್ಪಿಕೊಂಡಂತಿತ್ತು. ಅವುಗಳ ಮೇಲೆ ನೇರದಾಳಿ ಆಗಲೇ ಇಲ್ಲ. ಆಗುವಂಥ ಲೌಕಿಕ ಯಥಾರ್ಥವಾದಿಯಾದ ಆರ್ಥಿಕ ಪುನರ್ವ್ಯವಸ್ಥೆಯನ್ನು ಒಳಗೊಂಡ ಧ್ಯೇಯ-ಧೋರಣೆಯ ಕ್ರಿಯಾಚರಣೆಯ ಚಾಲನೆ ಈ ಚಳುವಳಿಗಳಿಗೆ 'ಸಿಗಲೇ ಇಲ್ಲ'. ಆದ್ದರಿಂದ ಎಷ್ಟೇ ಭಾವಾವೇಶದ ಭರದಿಂದ ಪ್ರಸಾರ ವಿಸ್ತಾರಗೊಂಡರೂ ಅವುಗಳನ್ನು ಆಧುನಿಕ ಅರ್ಥದಲ್ಲಿ ನಿಜವಾದ ಕ್ರಾಂತಿ ಸಾಧನೆಯೆಂದು ಹೆಸರಿಡುವಂತಿಲ್ಲ. ಅವೆಲ್ಲ ಹೆಚ್ಚು ಕಡಿಮೆ ಸಾಫಲ್ಯದ ಸವವ ಕಾಶದ ಮಂದ ಅಥವಾ ತೀವ್ರಗತಿಯ ದೇಶ-ಕಾಲ ಪರಿಮಿತಿಯ ಸಮಾಜಸುಧಾರಣೆಯ ಪ್ರಯತ್ನಗಳೋ ಪ್ರಯೋಗಗಳೋ ಎನ್ನಬಹುದು.

o o o

ಈ ಪ್ರಯತ್ನಗಳಲ್ಲಿ ನಿಜವಾಗಿಯೂ ಒಂದು ಸಮಗ್ರಕ್ರಾಂತಿಯಾಗಿ ಪರಿಣಮಿಸಿದ್ದು ಅರಬಸ್ಥಾನದಲ್ಲಿ ಮಹಮ್ಮದ ಪೈಗಂಬರರು ಸಾಧಿಸಿದ ಹೊಚ್ಚಹೊಸ ಹುರುಪು ಹುಮ್ಮಸ್ಸುಗಳ ಧರ್ಮ ಸುಧಾರಣೆಯೇ ಅವರು ಆ ಕಾಲದ ಬದ್ಧಮೂಲವಾದ ಪರಂಪರಾಗತವಾದ ಒಂದು ಬರ್ಬರ ಸಮಾಜದ ಧರ್ಮಸಂಘಟನೆಯನ್ನು ಬದಲಿಸಿ ಇಸ್ಲಾಂನ ಸ್ಥಾಪನೆಮಾಡಿ ಒಂದೇ ಪೆಟ್ಟಿಗೆ ತನ್ನ ದೇಶಕ್ಕೆ ಒಂದು ಧರ್ಮ, ಒಂದು ರಾಜಸತ್ತೆ ಹಾಗೂ ಒಂದು ರಾಷ್ಟ್ರೀಯತ್ವವನ್ನು ನೀಡಿದರು. ಧರ್ಮ ಅರ್ಥಕಾಮ ಈ ಪುರುಷಾರ್ಥಗಳ ರಂಗದಲ್ಲಿ ಪೈಗಂಬರನು ಆಮೂಲಾಗ್ರವಾಗಿ ಸರ್ವಸಂಗ್ರಾಹಕವಾಗಿ ಪರಿವರ್ತನೆ ಹೊಸ ಸಾಮಾಜಿಕ ಸಂಸ್ಕೃತಿಯ ಪ್ರವರ್ತನೆ ರೂಢಿಗೊಳಿಸಿದರೂ ತನ್ನ ಶಾಸ್ತ್ರಕ್ಕೆ ಶಸ್ತ್ರದ ಬಲವನ್ನು ಸೇರಿಸಿ ವ್ಯವಸ್ಥೆಯ ವಿರುದ್ಧ ಸಂಕುಲಯುದ್ಧವನ್ನೇ ಹೂಡಿ ಪರಶುರಾಮನಂತೆ 'ಶಾಪಾದಪಿ ಶರಾದಪಿ' ಹೋರಾಡಿ ಗೆದ್ದರು. (ಆದರೂ

ಕೊನೆಗೆ ವ್ಯವಸ್ಥೆಯೊಂದಿಗೆ ಒಂದು ಮಹತ್ವದ ಒಪ್ಪಂದ ಮಾಡಿಕೊಂಡೇ ಹಳೆಯ ಸಂಪ್ರದಾಯದ ಶ್ರೇಷ್ಠ 'ಕುರೈಶ'ರನ್ನು ಒಡಂಬಡಿಸಿಕೊಳ್ಳಬೇಕಾಯಿತು. 'ಶಾಬಾ'ದ ಪಾವಿತ್ರ್ಯವನ್ನು ಪೂಜೆಯನ್ನು ಒಪ್ಪಿಕೊಂಡು!) ಬಸವೇಶ್ವರನ ಹೊಸ ಪಂಥ (ಧರ್ಮ?)ವೂ ಮೊದಲೇ ವ್ಯವಸ್ಥೆಯ ಅಂಗವಾದ ಗುರುಪೀಠಗಳನ್ನು ಮನ್ನಣೆಗೆ ಸ್ವೀಕರಿಸಬೇಕಾಯಿತು—ಊರ್ಜಿತವಾಗಿ ಬೆಳೆಯಲು. ಇದೆಲ್ಲ ಹೊಂದಾಣಿಕೆ ಸಾಧ್ಯವಾಗಬೇಕಾದರೆ ಈ ಆಂದೋಲನಗಳು ಮೂಲತಃ ನಿಷ್ಠುರ ವರ್ಗಭೇದದ ಪ್ರಜ್ಞೆಯನ್ನು ಪಳಗಿಸಿಕೊಂಡಿಯೇ ಇದ್ದಿಲ್ಲವೆಂಬುದು ಸಿದ್ಧವಾಗುತ್ತದೆ. ಅಶೋಕಚಕ್ರದ ಸ್ತಂಭದಲ್ಲಿ ಕೊರೆದ ಆ ಮಹಾವಾಕ್ಯ **"ಸಮವಾಯ ಏವ ಸಾಧು!"** ಎಂಬುದೇ ಮಧ್ಯಯುಗದ ಹಾಗೂ ಅನಂತರದ ಇಂಥ ಆಂದೋಲನಗಳ ತಾತ್ವಿಕ ಭೂಮಿಕೆಯಾಗಿತ್ತು. ಈ ದೃಷ್ಟಿಗೆ ವರ್ಗ ಸಂಘರ್ಷ ಅದನ್ನು ಮುಚ್ಚಿನಿಂತ ವರ್ಣ ವೈಷಮ್ಯ ಆದ ಅಂತಃಕಲಹ ಒಪ್ಪಿ ನಡೆಯುವುದು ಪಥ್ಯವೆನಿಸುವುದಿಲ್ಲ.

ಇದೇ ವಿಶಾಲ ಮಾನವತೆಯ ಬಾಂಧವ್ಯದ ಪಾತಳಿಯಲ್ಲಿ ಸಮಕಾಲೀನ ವೈಷ್ಣವ ಭಕ್ತಿ ಆಂದೋಲನಗಳು ಬೆಳೆದು ಹಬ್ಬಿದವು. ಅವುಗಳಲ್ಲಿ ಮಹಾರಾಷ್ಟ್ರದ ವಿಠ್ಠಲ ಭಕ್ತಿಯ 'ವಾತಕಾರೀ' ಸಂಪ್ರದಾಯವೂ ಒಂದು. ಈ ಸಂಪ್ರದಾಯದ ಮುಂಚೂಣಿಯಲ್ಲಿ ನಿಂತ ಸಂತಮಂಡಳಿಯೂ ಶಿವಶರಣರಂತೆಯೇ ಸಂಮಿಶ್ರವಾಗಿತ್ತು. ಬ್ರಾಹ್ಮಣ, ವೈಶ್ಯ, ಕುಂಬಾರ, ಮಾಲಿ, ಸೊನಗಾರ, ಚರ್ಮಗಾರ, ಹೆಂಗಸರು-ಎಲ್ಲರೂ ಈ ಸಂತ ಮಾಲಿಕೆಯಲ್ಲಿ ಸೇರಿದ್ದರು. ಭಕ್ತಿರಸದಲ್ಲಿ ಮಿಂದೆದ್ದು ಸಮರಸಭಾವವನ್ನು ಸಾಧಿಸಿದ್ದರು. ಆದರೆ ಇದು ಭಾವಾತ್ಮಕವೇ ಆಗಿತ್ತು. ಅವರೆಲ್ಲರ ಮಟ್ಟಿಗೆ ಈ ಸಾಮರಸ್ಯ ಸತ್ಯವಿತ್ತು. ಆದರೆ ಹೊರಗಿನ ವರ್ಣನಿಷ್ಠ, ಜಾತಿಬದ್ಧ ಸಮಾಜಕ್ಕೆ ಅದು ಸ್ತುತ್ಯವೆನಿಸಲೇ ಇಲ್ಲ. ಆದ್ದರಿಂದ ಈ ವೈಷ್ಣವ ಪಂಥಗಳು ಅವು ಮರಾಠೀಸಂತರಿರಲಿ, ಬಂಗಾಲಿ ಗೌರಾಂಗ (ಚೈತನ್ಯ) ಪ್ರಭುಗಳದಿರಲಿ, ಕಬೀರನದಾಗಿರಲಿ, ನಮ್ಮಲ್ಲಿಯ ದಾಸಕೂಟವಾಗಿರಲಿ ಒಂದು ಆತ್ಮಸಂತೃಪ್ತಿಯಲ್ಲಿ ಸಫಲವಾದವೇ ಹೊರತು ಕ್ರಾಂತಿಯೆಂಬ ದೃಷ್ಟಿಯಿಂದ ಯಶಸ್ವಿಯಾಗದೇ ಹೋದವು.

ನಮ್ಮಲ್ಲಿ ಪೈಗಂಬರನ ಮಾದರಿಯನ್ನು ಗೀರಿದವರೆಂದರೆ ಸಿಖ್ಖರು. ಹೆಸರು ಇಸ್ಲಾಂ (ಶಾಂತಿ) ಎಂದಿದ್ದರೂ ವೀರವಿಜಗೀಷು ವೃತ್ತಿಯ ಮುಸ್ಲಿಂ ಶೈಲಿಯಲ್ಲಿಯೇ, ಒಬ್ಬ ಗುರು ಒಂದು ಗ್ರಂಥ ಒಂದು ಯುಯುತ್ಸು ವೃತ್ತಿಯದೀಕ್ಷೆ ಪಂಥದ್ದಾಯಿತು.ತಮ್ಮ ಧರ್ಮಕ್ಕೆ ರಾಜಕೀಯ ತಿರುವನ್ನು ಕೊಟ್ಟು ಹಳೆಯ ಹಿಂದೂ ಜನವನ್ನೇ ಹೊಸ ಹೋರಾಟದ ಹುರಿಯಾಳುಗಳಾಗಿ ಸಂಘಟಿಸಿ ಒಂದು ಬಗೆಯ ಕ್ರಾಂತಿಕಾರಿ ಕಾಯಕಲ್ಪವನ್ನು ರೂಪಿಸಿದ ಚಾರಿತ್ರಿಕ ನಾಯಕ ಸಿಖ್ಖಗುರುಗಳದು. ಮುಸ್ಲಿಂ

(ಮುಗಲ) ಆಕ್ರಮಣವನ್ನು ಪ್ರತಿಭಟಿಸಲು ಹಿಂದೂಗಳೇ ಆವಿರ್ಭಾವದಲ್ಲಿ ಇಸ್ಲಾಮೀಕರಣ ಹೊಂದಿದಂತೆ ಆಯಿತು. ಆದರೆ ಇದು ಬಹುಜನ ಸಮಾಜದ ಆರ್ಥಿಕ ಸಾಂಸ್ಕೃತಿಕ ನಡೆಯ ನೇಯ್ಗೆಯನ್ನು ಬಿಡಿಸಿ ಹೊಸದಾಗಿ ಹೆಣೆಯಲು ಹೊರಟದ್ದಲ್ಲ. ಹಿಂದೆ ನಮೂದಿಸಿದ ವಾರಕರೀ ಸಂಪ್ರದಾಯವಂತೂ ಆದೀತು ಕ್ರೈಸ್ತಪಂಥದವರ ಮಾದರಿಯಲ್ಲಿ ಪ್ರಧಾನವಾದ ಯಾವ ರಾಜಕೀಯ ಉದ್ದೇಶವೂ ಇಲ್ಲದೆ ಸತ್ತೆಯ ಸಲುವಾಗಿ ಸಂಘಟನೆ ಕಟ್ಟದೆ ಭಜನಭಕ್ತಿಯ ಭಾವಿತ ತಂಡವಾಗಿಯೇ ಒಂದು ಅಪೂರ್ವ ಭಾವೋನ್ಮಾದದಲ್ಲಿ ಬದುಕಿದ್ದರು. ಇಂದಿಗೂ ಆಷಾಢ ಕಾರ್ತಿಕಗಳಲ್ಲಿ ಪಂಢರಪುರದ ಯಾತ್ರೆಯ ಅವಧಿಯಲ್ಲಿ ಆ ಬದುಕನ್ನು ಮೆಲುಕು ಹಾಕುತ್ತಾರೆ.

XXXV ಆದರೆ ಇವೆಲ್ಲ ಭಕ್ತಿಪ್ರಧಾನ ಧಾರ್ಮಿಕ ಸ್ವರೂಪದ ಉತ್ಥಾನಗಳು ಪ್ರಚಲಿತ ಪ್ರತಿಷ್ಠಿತ ವ್ಯವಸ್ಥೆಗೆ ಬರೆ ಭಾವನೆಯ ಪಾತಳಿಯಲ್ಲಿ ವೈಯಕ್ತಿಕ ಆಂತರಿಕ ಪ್ರಪಂಚದಲ್ಲಿ ಪ್ರತಿಕ್ರಯಿಸಿದ ಒಂದು Negative ನಕಾರಾತ್ಮಕ ಪ್ರತಿಭಟನೆಯಾಗಿಯೇ ನಿಂತವು ನಡೆದವು ಯಾರೊಂದಿಗೆ ಹೋರಾಡಬೇಕೋ ಅವರೊಂದಿಗೆ ಮೌಲ್ಯಗಳ ಮಟ್ಟದಲ್ಲಿಯೇ ಮನೋಮಯವಾಗಿ ಒಪ್ಪಂದ ಹೊಂದಾಣಿಕೆ ಮಾಡಿಕೊಂಡಿದ್ದ ಈ ಚಳವಳಿಗಳು ಪರಿಮಿತ ಪರಿಧಿಯಲ್ಲಿಯೇ ಪ್ರಚುರವಾಗಿ ಪ್ರಭಾವಿಯಾದುವು— ಲಂಗರಿಗೆ ಮಾರುದ್ದ ಹಗ್ಗದಿಂದ ತಾನು ತೇಲಿಬಿಟ್ಟ ನಾವೆಯಂತೆ !

ಹೀಗಾಗಲು ಕಾರಣವೇನು ? ಈ ಆಂದೋಲನಗಳ ಪ್ರೇರಣೆಯಾಗಿ ಕೆಲಸ ಮಾಡಿದ ಭಕ್ತಿಭಾವನೆ ಸಕ್ರಿಯವಾದದ್ದೇ. ವೈಯಕ್ತಿಕ ಪಾತಳಿಯಲ್ಲಿ ಆಯಾ ಭಾವುಕ ವ್ಯಕ್ತಿಯ ಆಂತರಿಕ ಪ್ರವೃತ್ತಿಯಲ್ಲಿ, ಈ ಕ್ರಿಯಾಚರಣೆ ವರ್ಗನಿಷ್ಠವಲ್ಲ. ವರ್ಣವ್ಯವಸ್ಥೆಗೆ ಸಂಬಂಧಪಟ್ಟದ್ದು ಅಲ್ಲ. ಇದು ಆತ್ಮಸಂಸ್ಕಾರ. ಆತ್ಮೋನ್ನತಿ ಆತ್ಮೋದ್ಧಾರಕ್ಕೆ ಸಂಬಂಧಪಟ್ಟದ್ದು. ಸಾಮಾಜಿಕ, ಉಚ್ಚನೀಚ ಭೇದಗಳನ್ನು ತೊಡೆದು ಹಾಕಲು ಅವು ಮತ್ತೆ ಉಂಟಾಗುವುದೇ ಅಗತ್ಯಗೊಳಿಸಲು ಹೊರಟ ಆಮೂಲಾಗ್ರ ಪರಿವರ್ತನೆಯ ದೃಷ್ಟಿದರ್ಶನ ಈ ಆಂದೋಲನಗಳಿಗೆ ಇದ್ದಿಲ್ಲ. ಅದು ಹಾಗೆ ಸಾಮಾಜಿಕವಾಗಿ ವಸ್ತುನಿಷ್ಠವಿದ್ದಿಲ್ಲ. ಅದು ಆತ್ಮನಿಷ್ಠ ಭಾವನಾಮಯ ಆಹ್ವಾನವಾಗಿತ್ತು.

ಆದ್ದರಿಂದ ಕ್ರೈಸ್ತನಿಂದ ಬಸವಣ್ಣನವರೆಗೂ ಯಾರೂ ಒಂದು-ನಾವು ನೀವು ಕಾರ್ಲ್‌ಮಾರ್ಕ್ಸ್‌ನನ್ನು ಓದಿಕೊಂಡು ಪರಿಭಾವಿಸಿದ ಅರ್ಥದಲ್ಲಿ 'ಕ್ರಾಂತಿ'ಯನ್ನು ಉಂಟುಮಾಡಲಿಕ್ಕೆ ಹೊರಟವರಲ್ಲ. ಹೀಗೆಂದಮಾತ್ರಕ್ಕೆ ಇದು ಅವರನ್ನು ಟೀಕಿಸುವ ಯತ್ನವಲ್ಲ. ಮಾರ್ಕ್ಸ್‌ನು ಕಂಡುಹಿಡಿದ ಕ್ರಾಂತಿಯ ತತ್ವ ತಂತ್ರಗಳನ್ನು ಅವರು ಅರಿತವರಲ್ಲ. ಆದರೂ ಈ ಆಂದೋಲನಗಳು ಯಶಸ್ವಿಯಾದ ಮಟ್ಟಿಗೆ ಮಾರ್ಕ್ಸ್

ಪ್ರಣೀತ 'ಡೈನಮಿಕ್ಸ್' ಸ್ವಾಭಾವಿಕವಾಗಿಯೇ ಅನುಸರಿಸಿದುವು. ಆದರೆ ಆಧುನಿಕ ಅರ್ಥದಲ್ಲಿ 'ಕ್ರಾಂತಿ'ಯು ಘಟಿಸಲಿಕ್ಕೆ ಅದಷ್ಟು ಸಾಲದು. ಆಧುನಿಕ ಯುಗದಲ್ಲಿಯೂ ಅಷ್ಟು ಸಾಧ್ಯವೂ ಆಗಿಲ್ಲ, ಸಫಲವೂ ಆಗಿಲ್ಲ, ಅದಕ್ಕೆ ಅಗತ್ಯವಿದ್ದ ದೇಶ-ಕಾಲ-ಪರಿಸ್ಥಿತಿ ಐತಿಹಾಸಿಕ ಅನಿವಾರ್ಯತೆಯು ಒಂದು ಸಂದರ್ಭ ಪಕ್ವವಾಗಿದ್ದಿಲ್ಲ. ಅಂಥಲ್ಲಿ ಕ್ರಾಂತಿಯು ಪ್ರಯತ್ನವೆಲ್ಲ ಪ್ರತಿ ಕ್ರಾಂತಿಯಲ್ಲಿ ಪರಿಣಮಿಸಿದೆ-ಇರಲಿ.

೦ ೦ ೦ ೦

ಸಾಮಾನ್ಯವಾಗಿ ಇತಿಹಾಸದಿಂದ ಸ್ಪಷ್ಟವಾಗುವುದೇನೆಂದರೆ ದಾಸ್ಯ-ದಾರಿದ್ರ್ಯ-ದೈನ್ಯ-ದುಃಸ್ಥಿತಿಗಳು ಸಾಮಾಜಿಕವಾಗಿ ವಿಮೋಚನೆ ಅಸಾಧ್ಯವಾದಾಗ ವೈಯಕ್ತಿಕ ಮೊತ್ತದ ಕಲ್ಪನೆ ಕನಸು ನನಸಾಗುತ್ತದೆ. ದಬ್ಬಾಳಿಕೆ ಅರಾಜಕತೆ, ಪರಚಕ್ರಗಳ ನಿರಂತರ ಆಕ್ರಮಣ ಆ ಮೂಲಕ ಆರ್ಥಿಕ ಸಾಮಾಜಿಕ ದುರವಸ್ಥೆ ಉಂಟಾದಾಗ, ಸಾಮಾಜಿಕ ನೆಮ್ಮದಿಯೇ ನಷ್ಟವಾದಾಗ ಜನವೆಲ್ಲ ಒಂದು ಜೀವಂತ ಶರೀರದಂತೆ ಸಾಯುವ ಸಂಸ್ಥೆಯಂತೆ–ಸ್ಪಂದಿಸಲಾರದಾಗ ವ್ಯಕ್ತಿ ವ್ಯಕ್ತಿ ಹತಾಶ ಅಸಹಾಯ ಹಾಗೂ ತನಗೂ ಇತರರಿಗೂ ಪರಕೀಯ ಮತ್ತು ಏಕಾಂಗಿಯಾಗಿ ಬಿಡಿಬಿಡಿಯಾಗಿ ಸಿಡಿಯುತ್ತಾರೆ.

ಆಗ ಅಂಥ ಘೋರ ದುಃಖಸತ್ಯವನ್ನು ಬದಲಿಸುವುದೂ ಒಪ್ಪುವುದೂ ಜೀವಕ್ಕೆ ಅವಶ್ಯವೆನಿಸುತ್ತದೆ. ಸಾಮಾಜಿಕ ಅಭ್ಯುದಯದ ಆ ಮೂಲಕ ಸುಖದ ಸಾಧ್ಯತೆ ಭವದ ಬದುಕು ಅಸಹ್ಯವಾಗುತ್ತನೆ. ಆಗ ಅದನ್ನೆಲ್ಲ ಅಲ್ಲಗಳೆದು ಅದೆಲ್ಲ ಮಾಯೆಯೆಂದು ಜಗೆಯುವದು. "ಈ ಬದುಕು ಬರಿ ಭ್ರಮೆ' ಎಂದು ಅಂತರ್ಮುಖಿಯಾಗಿ ಆತ್ಮಾನಂದದಲ್ಲಿ ಹಾಂಗೊಮ್ಮೆ ಹೀಂಗೊಮ್ಮೆ ಕುಣಿದು ಅದನ್ನು ಮರೆಯುವುದು ಆರಂಭವಾಗುತ್ತದೆ. "ಇದ್ದದ್ದು ಮರೆಯೋಣ। ಇಲ್ಲದ್ದು ತೆರೆಯೋಣ। ಹಾಲ್ಜೇನು ಸುರಿಯೋಣ" ಎಂದು ಬೋಧಿಸುವವರು ಮುಂದೆ ಬರುತ್ತಾರೆ. ಕನ್ನಡ ಜೋಗಿಯ ನಾದಕ್ಕೊ ಮರುಳಾದ ಮಕ್ಕಳಂತೆ ಮಂದಿ ಅವರ ಬೆನ್ನಿಗೆ ಬೀಳುತ್ತಾರೆ. ಬದುಕಿನಲ್ಲಿ ಇಲ್ಲದಿದ್ದ ಬಿಡುಗಡೆಯನ್ನು ವ್ಯಕ್ತಿ ಆತ್ಮದಲ್ಲಿ ಅಧ್ಯಾತ್ಮದ ಗುಂಗಿನಲ್ಲಿ ಆಲಿಸಲು ಅರಿಯಲು ನೋಡುತ್ತಾನೆ.

ನಮ್ಮ ದೇಶದಲ್ಲಿಯೂ ಆರಂಭದಲ್ಲಿ ಜನ ವಿಜಿಗೀಷುಗಳಾಗಿದ್ದರು. ಆಗ ನಮ್ಮ ಬಾಳಿನ ಮೌಲ್ಯಗಳು, ಧರ್ಮ-ಅರ್ಥಕಾಮ ಈ ಮೂರೇ ಆಗಿದ್ದವು. ಅನಂತರ ಜನ ಮನವನ್ನು ಈ ವೈರಾಗ್ಯ ನೈರಾಶ್ಯ ಆವರಿಸಿತು. ಅಂದಿನಿಂದ 'ಮೋಕ್ಷ' ವೆಂಬ ನಾಲ್ಕನೆಯ ಪುರುಷಾರ್ಥವು ಕಾಣಿಸಿಕೊಂಡಿತು. "ಅಭ್ಯುದಯ"ದ ಹೊರತಾಗಿ

"ನಿಶ್ರೇಯಸ"ನೆಂಬುದು ಹೆಚ್ಚಿನ ಗುರಿಯಾಯಿತು. ಭಕ್ತಿಮಾರ್ಗ ಅದಕ್ಕೆ ಒಳದಾರಿ ಯಾಯಿತು, ಹಿಂದೆ ಹೇಳಿದ ಪಂಥಗಳೆಲ್ಲ ಆ ದಾರಿಯ ಮಾದರಿಗಳು.

XXXVI ಈ ಪಂಥಗಳ ಸಂಸ್ಥಾಪಕರು ಕ್ರಿಸ್ತ, ಬುದ್ಧ, ಮಹಾವೀರ ಮಹಮ್ಮದ ಗುರುನಾನಕರೇ ಮುಂತಾದವರು ಪ್ರಾಮಾಣಿಕವಾಗಿಯೇ ಈ ಆಂತರಿಕ ಆತ್ಯಂತಿಕ ಪುರುಷಾರ್ಥದ ಪ್ರಾಪ್ತಿಗಾಗಿಯೇ ತಪಿಸಿ ಅದನ್ನು ಬೋಧಿಸಿದರು. ಆದರೆ ಬಹುಜನ ಸಾಮುದಾಯವು ಈ ಪಂಥಗಳನ್ನು ಭರದಿಂದ ಸ್ವೀಕರಿಸುವಾಗ ಅವರೆಲ್ಲ ಮೋಕ್ಷದ ಉದ್ದೇಶದಿಂದಲೆ ಪ್ರೇರಿತರಾಗಿದ್ದರೆಂದು ಭಾವಿಸುವುದು ದೊಡ್ಡತನವಾದೀತು. ಜನಸಮುದಾಯವು ಹೊಸಧರ್ಮವನ್ನೋ ಭಕ್ತಿಪಂಥವನ್ನೋ ಅಪ್ಪಿಕೊಳ್ಳುವದು. ಅದರಿಂದ ತನ್ನ ಐಹಿಕ, ಪ್ರಾಪಂಚಿಕ ಸುಖದ ಹಿತದ ಪ್ರಶ್ನೆ ಬಗೆಹರಿದೀತು ಎಂಬ ಒಂದೇ ಆಸೆಯಿಂದ. ಆದ್ದರಿಂದಲೇ ಇಂಥ ಧರ್ಮಪಂಥಗಳು ರಾಜಾಶ್ರಯವನ್ನು ಹೊಂದನಂತರವೇ ಭರದಿಂದ ಬೆಳೆದು ವೈಭವ ಸಂಪನ್ನವಾಗಿ ಹೆಚ್ಚು ಹೆಚ್ಚು ಅನುಯಾಯಿಗಳನ್ನು ಆಕರ್ಷಿಸುವದು (ಇದರ ವಿವೇಚನೆ ಇಲ್ಲಿ ಅಪ್ರಸ್ತುತ) ಸಾಧ್ಯವಾಯಿತು.

ಮಾರ್ಕ್ಸ್‌ನ "ವರ್ಗಮಿಶ್ರಣ"ದ ಹಾಗೂ ಆ ಮೂಲಕ ಪ್ರಕಟವಾಗುವ "ವಿರೋಧಿ ವಿಕಾಸ"ದ ತತ್ವಗಳನ್ನು ಅರಿಯದ, ಒಪ್ಪದ ಬುದ್ಧಿಗೂ ಒಂದು ಮಾತು ಸ್ಥೂಲವಾಗಿ ಹೊಳೆಯದೆ ಇರಲಾರದು. ಲೌಕಿಕ ಪರಿಭಾಷೆಯಲ್ಲಿಯೇ ಹೇಳುವದಾದರೆ ಮಾನವ ಸಮಾಜವು ಎಂದಿನಿಂದಲೂ ಹುಡುಕುತ್ತ ಹಿಡಿದುಕೊಳ್ಳುತ್ತ ಬಂದ ಮೂರು "ಅರ್ಥ" ಗಳು ಸತ್ತೆ-ಸಂಪತ್ತು ಮತ್ತು ಸಂಸ್ಕೃತಿ ಇವುಗಳಲ್ಲಿ ಒಂದು ಇದ್ದಲ್ಲಿ ಉಳಿದ ಎರಡು ಸೇರಿಕೊಳ್ಳುವಂತೆ ಆಗುತ್ತದೆ. ಈ ಆಗುವಿಕೆಯು ಇತಿಹಾಸದ ಅಥವಾ ಮಾನವ ಸಮಾಜದ ಪ್ರಗತಿಯ ಕಥೆ.

ಜೀವನದ ಯಾವ ಯಾವ ಕ್ಷೇತ್ರದಲ್ಲಿಯೇ ಆಗಲಿ ಒಬ್ಬರ, ಕೆಲವರ ಕೈಯಲ್ಲಿಯೇ ಉಳಿದ ಸತ್ತೆಯನ್ನೋ ಸಂಪತ್ತನ್ನೋ ಕಸಿದು ಹಂಚಿಕೊಳ್ಳಲು ಹವಣಿಸುವದು, ಹೆಣಗುವದು ಅಪರಿಹಾರ್ಯವಾಗುತ್ತದೆ. ಪ್ರಜಾಪ್ರಭುತ್ವ. ಸಮಾಜವಾದ, ಜನಾಭಿಮುಖ ಸಾಹಿತ್ಯ-ಸಂಸ್ಕೃತಿ ಇವೆಲ್ಲ ಆಂದೋಲನ ಈ ಹಂಚಾಣಿಕೆಯ ಹೊಂಚು ಧರ್ಮ ಪಂಥಗಳ ಪ್ರಸಾರ-ವಿಸ್ತಾರಗಳಿಗೂ ಇದೇ ಸೂತ್ರವು ಅನ್ವಯಿಸುತ್ತದೆ. ಇದರಿಂದಲೇ ಅವುಗಳಿಗೆ ಗತಿಶಕ್ತಿ.

ಆದರೆ ಗುಣಕ್ಕೂ ಪರಿಮಾಣಕ್ಕೂ ಯಾವಾಗಲೂ ಎಲ್ಲೆಲ್ಲೂ ವ್ಯಸ್ತಪ್ರಮಾಣ. ಪ್ರಸರಣ ಹೆಚ್ಚಿದಂತೆ ಧರ್ಮದಲ್ಲಿ ತತ್ವ ಪ್ರಣಾಲಿಯಲ್ಲಿ ಸೂತ್ರದ ಅಂಶ ತೆಳುವಾಗುತ್ತದೆ. ಸರಳೀಕರಣ ಸಂಬಂಧ ಸುಲಭೀಕರಣದಿಂದಾಗಿ, ವರಕವಿ ಬೇಂದ್ರೆ

ಅಂದರಂತೆ "ಮತಸತ್ತು'' ಮಠ ವಾಗುತ್ತದೆ. ಆಗ ಅವರೇ ಅದರಂತೆ "ಅಲ್ಪ ಪ್ರಾಣಕ್ಕು ವಿಸ್ತಾರವೆ ವಿಶಾಸ" ವಾಗುತ್ತದೆ, ಇದಕ್ಕೆ ಕಾರಣ ವಾದವು ಸಂಸ್ಥೆಯಾಗಿ ಸ್ಥಾಪಿತಿ ಹಿತಾಸಕ್ತಿಗಳನ್ನು ಬೆಳೆಯಿಸಿಕೊಳ್ಳುತ್ತದೆ. ಆಚಾರ ಸಂಪ್ರದಾಯಗಳು ಕರ್ಮಠ ದಂಭಾಚಾರವಾಗಿ ಹೊಸ ಸರಪಣಿಯ ಸಮಾಜವನ್ನು ಬಿಗಿಯುತ್ತದೆ. ಆದರಿಂದ ಬಿಡಿಸಿಕೊಳ್ಳಲು ಹೊಸಪಂಥ ಆಂದೋಲನ ಆರಂಭವಾಗುತ್ತದೆ.

ಹಳೆಯ ಧರ್ಮ ಸತ್ತು ಹೊಸಧರ್ಮ ಹುಟ್ಟುತ್ತದೆ ಕೆಲಸಲ ಹಳೆಯ ಮಧ್ಯಕ್ಕೆ ಹೊಸ ಸೀಸೆ. ಕೆಲಸಲ ಹಳೆಯ ಸೀಸೆಯಲ್ಲಿ ಹೊಸಮಧ್ಯ. ಎರಡಕ್ಕು ಅದೇ ಹೆಸರ ಪಟ್ಟಿ ! ಆದರೆ ಇದರ ವ್ಯತ್ಯಾಸ ಬೇರೆ. "old order changeth yielding place to new .........Lest one good custom should Corrupt the world"

— o —

---

**ಒಂದು ಸೂಚನೆ :**

ಲಂಕೇಶ್‌ರವರಿಗೆ ಐವತ್ತು ವರ್ಷ ಆದ ಸವಿನೆನಪಿಗಾಗಿ ಕಳೆದ ಆಗಸ್ಟ್ ತಿಂಗಳಲ್ಲಿ ಅವರ ಸಾಹಿತ್ಯದ ಬಗ್ಗೆ ವಿಚಾರ ಸಂಕಿರಣ ಮಾಡುವುದಾಗಿ ಪ್ರಕಟಿಸಿದ್ದೆವು. ಆದರೆ ಕಾರಣಾಂತರಗಳಿಂದ ಮುಂದೂಡಿದ್ದೆವು. ಈಗ ಜೂನ್ ತಿಂಗಳ ಮೊದಲವಾರದಲ್ಲಿ ನಡೆಸಿಕೊಡಲಾಗುವುದು

ಈ ಸಂದರ್ಭದಲ್ಲಿ ಪ್ರಬಂಧ ಓದುವವರು :

**ಸಣ್ಣ ಕಥೆ :** ಡಾ॥ ಕೆ. ವಿ. ನಾರಾಯಣ, **ಕಾವ್ಯ :** ಹೆಚ್.ಎಸ್. ರಾಘವೇಂದ್ರರಾವ್, **ವಿಮರ್ಶೆ :** ಟಿ.ಪಿ. ಅಶೋಕ್, **ಮುಸ್ಸಂಜೆಯ ಕಥಾಪ್ರಸಂಗ :** ರಾಜೇಂದ್ರಚೆನ್ನಿ, **ಬಿರುಕು :** ಕೆ.ಎಂ ಕೋದಂಡರಾಮ್, **ನಾಟಕಗಳು :** ಎ. ಆರ್. ನಾಗಭೂಷಣ್, **ಸಂಕ್ರಾಂತಿ :** ಜಿ. ರಾಜಶೇಖರ್ (ರಾಜಶೇಖರ್‌ರವರನ್ನು ಕೇಳಲಾಗಿದೆ.) **ಲಂಕೇಶ್ ಪತ್ರಿಕೆ :** ಡಾ॥ ಎಸ್. ಚಂದ್ರಶೇಖರ್,

---

# ನನ್ನ ನಿನ್ನ ಸ್ನೇಹ

ನೀನು : ಅಲ್ಲಲ್ಲಿ ಮುಗಿಮಾಗಿ ನೆನಪು ಕನವರಿಕೆ
ನೀನು ನಿನ್ನಲ್ಲಿ ಬೆಳಕು ಹೊತ್ತ
ಚಂದಿರನ ತೇರಿಗೆ ಶ್ರಾವಣದ ಹೊದರು
ಮಡಿಲಲ್ಲಿ ಮುಖವಿಟ್ಟು ಹೇಳಬಹುದೆಲ್ಲ
ಕಣ್ಣಲ್ಲಿ ಹೊಕ್ಕಾಗ ಹೊರಗೆ ಎಲ್ಲಿಂದಲೋ ಮಾತು
ಹೊತ್ತು ಹೊತ್ತಿನ ಗಾಣದೆತ್ತಿಗೆ ಮೌನ ಗಾಳಿಹಾದಾಗ
ಮಂಜು ಕಣ್ಣಲ್ಲಿ ಬೆಚ್ಚನೆಯ ನೀರು
ಬರಬಹುದೇ ಸಿಹಿ ಬಯಕೆಯ ಸವಾರಿ
ನೀನಾಗಿ ಮುಗಿಲ ರೆಪ್ಪೆ ಮುಚ್ಚಿ
ಇರುಳ ತನಕ ತೆವಳಿ..........

ನಾನು : ವಸಂತಗಳಎ ದೆ ಮೇಲೆ ಹೆಜ್ಜೆಯಿಟ್ಟ
ಬಿರಿದ ಮೊಗ್ಗಿಗೆ ತೋರಣ ಸುಗ್ಗಿ ಹಬ್ಬ
ಹಾಡುತ್ತಾಳೆ ಹುಡಿಗಿ ಪ್ರೇಮ ಕಥೆಗಳ
ಗುಂಗು ಗುನುಗು ಇಳಿಜಾರು ಗುಪ್ಪೆ
ನಾ ಹೇಗೆ ಬರೆದು ಮುಗಿಸಬಹುದುತ್ತರ
ಮುಗಿಲ ಬೆನ್ನಟ್ಟಿ ಹೊರಟ ದೂರಸಾಲು
ತಡಹಿಡಿಯುತ್ತದಲ್ಲಿ ಮನದತಿದಿಯೊತ್ತಿ
ಹೇಗೋ ನಗುವ ಎತ್ತು ತವಕ
ಅವನಾಸೆ ಕದತಟ್ಟಿ ಮುಟ್ಟಬಹುದೇ
ನಾನಾಗಿ ರೆಕ್ಕೆ ಬಿಚ್ಚಿ
ಹಗಲ ಗೂಡಿಗೆ ಮರಳಿ..........

ಸ್ನೇಹ : ಹೆಚ್ಚಲ್ಲದ ನೆನಕೆ ಮೊದಲಷ್ಟು
ಪರಿಚಯಕ್ಕೆ ತಬ್ಬಿ,

---

ಗಾಯತ್ರಿ '161' 'ಪುಷ್ಪಶ್ರೀ', ಎರಡನೇ ಘಟ್ಟ, ರಾಜಾಜಿನಗರ, ಬೆಂಗಳೂರು-1

ತುಂಟತನ ಹೊಸೆದ ತೆರೆದ ಹಾದಿಗೆ
ಕೈಬೀಸಿದರೂ ಇನ್ನೂ ಹಿಡದ ಲಜ್ಜೆ
ಆಗಾಗ ಮರಳ ಹಾಸಲ್ಲಿ ಕಣ್ಣಿಡದ
ಕನಸುಗಳು ಖುಷಿ ಗುರುತೊತ್ತಿ ಸರಿದಾಗ
ಇಂದು ನಾಳೆಗೆ ತುಂಬಿ ಸಿಗಬಹುದೇ
ಸಾವಾಗಿ ದಿಕ್ಕು ದಿಕ್ಕಿಗೆ
ಹಗಲಿರುಳ ಸರಪಳಿ.........

—ಗಾಯತ್ರಿ ಬಿ. ಎಸ್

## ಹಿಡಿಸ್ಯಾಳ ಹುಚ್ಚ ಹಿಡಿಸ್ಯಾಳ

ಇವಳು ಎಲ್ಲಿಂದ ಬಂದಾಳ ಈ ಚೆಲುವಿ
ನೋಡ ಮಾವಾss ಹುಡಿಗಿಯಾsss ॥ಪ॥

ಉಟ್ಟ್ಯಾಳ ಚಂದ್ರಕಾಳಿ ಸೀರಿ । ತೊಟ್ಟ್ಯಾಳ ಚಿಕ್ಕಿಯ ಕುಬಸ
ಇವಳ ನೋಟೇನss । ಮೈಯಾ ಮಾಟೇನ. ॥೧॥

ಕಟ್ಟ್ಯಾಳ ಗೆಜ್ಜೆಯ ಟೀಕಿ । ಬಿಟ್ಟ್ಯಾsಳ ಕ್ಯಾದಿಗಿಜಡಿ
ಇವಳ ನಡಿಗೇನss । ಮೈಯಾ ಬಡಿಗೇನ ॥೨॥

ಹಣೆಮ್ಯಾಲ ಕುಂಕುಮ ಇಟ್ಟು । ಗಲ್ಲsಕ ಹಚ್ಚಿಯಬೊಟ್ಟು
ಇವಳ ಎಮಕೇನss । ಮೈಯಾ ಬೆಳಕೇನ ॥೩॥

ಕಣ್ಣsಲೆ ನನ್ನನು ಕರೆದು । ಮೈತುಂಬs ಪ್ರೀತಿಯ ಎರೆದು
ಹಿಡಿಸ್ಯಾಳ ಹುಚ್ಚ ಹಿಡಿಸ್ಯಾಳ । ಕುಣಿಸ್ಯಾಳs ಮಾವಾಕುಣಿಸ್ಯಾಳ ॥೪॥

ಪಿರುತೀsಯ ಚೂರಿಯಲಿಂದ ।ಎದಿಯಾsಗ ಗಾಯವ ಮಾಡಿ
ಇರದಾಳ ನನ್ನ ಇರದಾಳ । ಕಡದಾಳ ಗಲ್ಲ ಕಡತಾಳ ॥೫॥

ಮೈ ತುಂಬs ಕನಸನು ಬಿತ್ತಿ । ಮನದಾsಗ ಹೂವನು ಬೆಳಸಿ
ಹಾಡ್ಯಾಳ ಮಾವ ಹಾಡ್ಯಾಳ । ಹಕ್ಯಾಗಿ ಈಕಿ ಹಾರ್ಯಾಳ ॥೬॥

ಕನ್ನಡ ಪ್ರಾಧ್ಯಾಪಕ, ಕರ್ನಾಟಕ ಕಾಲೇಜು, ಬೀದರ-585401

ಭಾವಽನೆಗಳನು ಉಳಿಸಿ । ಒಳನೋಽಟಗಳನು ಬೆಳಸಿ
ಬಿತ್ತ್ಯಾಳಽಪಿರುತಿ ಬಿತ್ತ್ಯಾಳ । ಬೆಳದಾಳಽ ಋಷಿಯ ಬೆಳದಾಳ ॥೭॥

—ಡಾ. ಬಸವರಾಜ ಸಬರದ.

## ಹಂಬಲಗಳು ಹಲುಬುತ್ತಿವೆ

ಗೆಳತೀ—
ನಿನ್ನ ಮಾನಸ ಸರೋವರದಲ್ಲಿ
ಹಂಬಲಗಳು ಹಲುಬುತ್ತಿವೆ
ಕಮಲಗಳು ಕಂದುತ್ತಿವೆ
ಗಾಳಿ, ಬೆಳಕು, ಬಣ್ಣಕ್ಕಾಗಿ

ಮುಗಿಲ ನೋಡಿದರೆ
ಒಡೆದ ಕನ್ನಡೀ
ಚೂರುಗಳಾ ನಕ್ಷತ್ರಗಳು.

ತಳಮಳಿಸುವ ಆಸೆಗಳಿಗೆ
ಆಕಾರ ಕೊಡಲು ಸಾಧ್ಯವಾಗುತ್ತಿಲ್ಲ
ನನ್ನೀ ಬಣ್ಣದ ಕುಂಚದಿಂದ.

ಸುಡುವ ನೆಲದಲ್ಲಿ
ಕೊರೆವ ಬಿರುಕಲ್ಲಿ
ಸಾವಿನಂಚಿನ, ಮಿಂಚಿನ
ಭಾವನೆಗಳ ನಾನೀಗ
ಗುರುತಿಸಬೇಕಾಗಿದೆ ಗೆಳತಿ.

ಕಪ್ಪು ಕಿರೀಟದಾ ಕತ್ತಲೆ ರಾಜನ
ಬೆತ್ತಲೆ ಮಗಳ ಹುಡುಕುದಕ್ಕಾಗಿ

ಶಂಕರ ಕಟಗಿ, c/o. ಸಂಕ್ರಮಣ, ಬೆಳಗಾಂ ನಾಕಾ ಹತ್ತಿರ, ಧಾರವಾಡ - ೮

ಆಗಿಯುತ್ತೇನೆ ಭೂಮಿ ಒಡಲ
ಅವಳನ್ನೇ ಬಣ್ಣ ಮಾಡಿ ಇನ್ನ ಹಂಬಲ
ಕಮಲಗಸಿಗಳಿಗೆ ತೀಡಲು,
ಮುಗಿಲ ಚುಕ್ಕೆಗಳ ಹಿಡಿದು
ನಿನ್ನೆದೆ ಕಡಲಿಗೆ ಸುರವಿ
ಕಪ್ಪು ಹೆಜ್ಜೆಯ ಹೆಜ್ಜಗಳಲಿ
ಬೆಳಕಿನ ತೆರೆಗಳನ್ನೆಬ್ಬಿಸಲು.

—ಶಂಕರ ಕಟಗಿ

## ಬ್ಯಾಂಕಿಂಗ್ ನಿಘಂಟು

—ಕೆ. ಜನಾರ್ದನ ತುಂಗ

ಕನ್ನಡ ಮಾಧ್ಯಮದ ವಿಷಯ ಚರ್ಚೆಗೆ ಬಂದಾಗಲೆಲ್ಲ ಕನ್ನಡದಲ್ಲಿ ತಾಂತ್ರಿಕ ವಿಷಯಗಳ ಬೋಧನೆ ಸಾಧ್ಯವೇ ? ಎಂಬ ಪ್ರಶ್ನೆ ಕೇಳಿಬರುತ್ತದೆ. ಇದಕ್ಕೆ ಮುಖ್ಯ ಕಾರಣ ಕನ್ನಡ ಬಳಕೆಗೆ ಬೇಕಾದ ವ್ಯಾಪಕ ಅಧೋರಚನೆ ಇಲ್ಲದಿರುವುದು. ಕನ್ನಡ ಚಳವಳಿ ಅರ್ಥವತ್ತಾಗಬೇಕಾದರೆ, ಫಲಪ್ರದವಾಗಬೇಕಾದರೆ ಈ ಅಧೋರಚನೆಯ ನಿರ್ಮಾಣಕಾರ್ಯ ನಡೆಯಬೇಕು.

ಈ ದಿಸೆಯಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಕನ್ನಡ ಸಂಘಗಳ ಸಮನ್ವಯ ಸಮಿತಿ ಹೊರತಂದಿರುವ ಬ್ಯಾಂಕಿಂಗ್ ನಿಘಂಟು ಒಂದು ಸುತ್ಯರ್ಹ ಪ್ರಯತ್ನ. ಖ್ಯಾತ ಅಂಕಣಕಾರ, ಅರ್ಥಶಾಸ್ತ್ರಜ್ಞ ಪ್ರಾ॥ ಎಚ್ಚೆಸ್ಕೆ ಇದರ ಸಂಪಾದಕರು. ಬ್ಯಾಂಕಿಂಗ್, ಸಮಾಜದ ಅನಿವಾರ್ಯ ಚಟುವಟಿಕೆಯಾಗುತ್ತಿರುವಾಗ, ಸಮಾಜ ಪರಿವರ್ತನೆಯ ಸಾಧನವಾಗುತ್ತಿರುವಾಗ ಜನಸಾಮಾನ್ಯರ ಭಾಷೆಯಲ್ಲಿ ವ್ಯವಹರಿಸುವ ಅಗತ್ಯವಿದೆ. ಇಂತಹ ಸಂದರ್ಭದಲ್ಲಿ ಹೊರಬಂದಿರುವ ನಿಘಂಟು ಸಮಯೋಚಿತ.

---

ಬ್ಯಾಂಕಿಂಗ್ ನಿಘಂಟು ಸಮನ್ವಯ ಸಮಿತಿ : ಕನ್ನಡ ಸಂಘಗಳು : ಭಾರತೀಯ ಸ್ಟೇಟ್ ಬ್ಯಾಂಕ್ ಬೆಂಗಳೂರು–2, ಬೆಲೆ : 4 ರೂ.

ಕರ್ನಾಟಕದ ವಿವಿದೆಡೆಗಳಲ್ಲಿ ಬ್ಯಾಂಕಿಂಗ್ ವಿಷಯದ ಕನ್ನಡ ಶಬ್ದಗಳು ಬಹಳ ಹಿಂದಿನಿಂದಲೂ ಬಳಕೆಯಲ್ಲಿವೆ. ಇವುಗಳನ್ನು ಸಮಗ್ರವಾಗಿ ಪರಿಶೀಲಿಸಿ, ವ್ಯಾಪಕವಾಗಿ ಬಳಕೆಯಲ್ಲಿರುವ, ಅರ್ಥಶಾಸ್ತ್ರದ ಕಿವಿಗೆ ಹಿತವಾದ ಶಬ್ದವನ್ನು ಸಾರ್ವತ್ರಿಕ ಚಲಾವಣೆಗಾಗಿ ಪ್ರಧಾನವಾಗಿ ಆಯ್ದುಕೊಳ್ಳಬೇಕಾಗುತ್ತದೆ. ಈ ನಿಘಂಟು ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದೆ. ಉದಾ : Invidental-ಸಾದಿಲ್ವಾರು Credit - ಉದರಿ ಇತ್ಯಾದಿ, ಹಾಗೆಯೇ, ತುಂಬ ಬಳಕೆಯಲ್ಲಿರುವ ಆಂಗ್ಲ ಪದಗಳನ್ನು ಯಥಾವತ್ ಉಳಿಸಿಕೊಳ್ಳಲಾಗಿದೆ ಉದಾ : ಚೆಕ್ಕು, ಬ್ಯಾಂಕು, ಡ್ರಾಫ್ಟು ಇತ್ಯಾದಿ. ಕೆಲವು ಆಧುನಿಕ ಪರಿಕಲ್ಪನೆಗಳಿಗೆ ಮೂಲ ಇಂಗ್ಲಿಷ್ ಶಬ್ದ ಧ್ವನಿಸುವ ಅರ್ಥವನ್ನು ಗಮನಿಸಿ ಸುಂದರ ಕನ್ನಡ ಶಬ್ದಗಳನ್ನು ಸೃಷ್ಟಿಸಲಾಗಿದೆ. ಉದಾ : Forfaiting – ಅನುಪಾಶ್ರಯಣೀಕರಣ, Syndicated Loan - ಕೂಟಸಾಲ ಇತ್ಯಾದಿ.

ಆದರೆ ಈ ನಿಘಂಟಿನ ಹೆಚ್ಚುಗಾರಿಕೆ ಇರುವುದು ಶಬ್ದ-ಅರ್ಥಗಳ ಕೊನೆಯಲ್ಲಿ ನೀಡಿರುವ ವಿವರಣೆಗಳಲ್ಲಿ. ಉದಾಹರಣೆಗೆ Organisation ಎಂಬ ಶಬ್ದಕ್ಕೆ 1. ಸಂಘಟನೆ, 2. ಸಂಘ, ಸಂಸ್ಥೆ ಎಂಬ ಅರ್ಥ ನೀಡಿರುವುದರ ಜೊತೆಗೆ ಅಡಕವಾಗಿ ವಿವರಣೆಯನ್ನು ನೀಡಲಾಗಿದೆ. ಅನೇಕ ಶಬ್ದಗಳಿಗೆ ಸಂಬಂಧಿಸಿದಂತೆ ಕಾನೂನಿನ ಹಾಗೂ ಇತರ ವಿವರಗಳನ್ನೂ ನೀಡಲಾಗಿದೆ. ನಿಘಂಟಿನ ಕೊನೆಯಲ್ಲಿ ಕನ್ನಡ ಪದ ಸೂಚಿಯನ್ನು ಕೊಡಲಾಗಿದ್ದು ಇದು ಕನ್ನಡ-ಇಂಗ್ಲಿಷ್ ನಿಘಂಟೂ ಆಗಿದೆ. ಸಂಕೇತಾಕ್ಷರಗಳ ಪೂರ್ಣರೂಪ ಹಾಗೂ ಅರ್ಥ ಎರಡನ್ನೂ ಸೇರಿಸಿಕೊಳ್ಳಲಾಗಿದೆ. ಹೀಗಾಗಿ ಇದು ಬ್ಯಾಂಕಿಂಗ್ ವೃತ್ತಿನಿರತರಿಗೆ ಮಾತ್ರವಲ್ಲದೆ ಬ್ಯಾಂಕಿಂಗ್ ಅಭ್ಯಾಸಿಗಳಿಗೂ ಉಪಯುಕ್ತವಾಗಬಲ್ಲ ಪುಟ್ಟ ವಿಶ್ವಕೋಶ.

ಮೊದಲ ಪ್ರಯತ್ನವಾಗಿರುವುದರಿಂದ ಇದರಲ್ಲಿ ಬಿಟ್ಟು ಹೋಗಿರಬಹುದಾದ ಶಬ್ದಗಳನ್ನು ಮುಂದಿನ ಆವೃತ್ತಿಗಳಲ್ಲಿ ಸೇರಿಸಿಕೊಳ್ಳುವ ಭರವಸೆ ನೀಡಿದ್ದಾರೆ, ಪ್ರಕಾಶಕರು. ಈ ದಿಸೆಯಲ್ಲಿ ಸಹೃದಯರ ಸಹಕಾರವನ್ನು ಕೋರಿದ್ದಾರೆ. ಆಕರ್ಷಕ, ದೋಷರಹಿತ ಮುದ್ರಣದ ಈ ನಿಘಂಟು ಒಂದು ಸಂಗ್ರಾಹ್ಯ ಹೊತ್ತಗೆ. ಪ್ರಕಟಣ ಪೂರ್ವದಲ್ಲಿಯೇ ಶೇಕಡ 80ಕ್ಕು ಹೆಚ್ಚು ಪ್ರತಿಗಳು ಮಾರಾಟವಾದ ದಾಖಲೆಯೇ ನಿಘಂಟಿನ ಮಹತ್ವವನ್ನು ಸೂಚಿಸುತ್ತದೆ. ●

# ಕೆ. ಟಿ. ಶಿವಪ್ರಸಾದರ ಕಲೆ

—ಕ. ವೆಂ. ರಾಜಗೋಪಾಲ್

ಈ ವರ್ಷದ ಪ್ರಾರಂಭಕ್ಕೆ ಸೇರಿದಂತೆ ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ಪ್ರದರ್ಶನಗೊಂಡ ಇಬ್ಬರು ಕಲಾವಿದರ ಬಗ್ಗೆ ಈ ಟಿಪ್ಪಣಿಯನ್ನು ಬರೆಯಲು ನನಗೆ ಹೆಮ್ಮೆಯೆನಿಸಿದೆ. ಇಂತಹ ಅನಿಸಿಕೆ ನನಗೆ ಕಳೆದ ಮೂವತ್ತು ವರ್ಷಗಳಿಲ್ಲಿ ಮೊದಲೆಂದರೂ ಸರಿ. ಅದಕ್ಕೆ ಕಾರಣಗಳು ಬಲವಾಗಿವೆ, ನನ್ನ ಅವಜ್ಞತೆಯೆಂದು ಬೇಕಾದರೂ ಹೇಳಬಹುದು. ಆದರೆ ಅಲ್ಲೊಂದು ಇಲ್ಲೊಂದು ನನ್ನ ಪ್ರಜ್ಞೆಯನ್ನು ಕೆಣಕಿದರೂ ಅದೆಲ್ಲಾ ಕೊಂಚ ದಿನಗಳಲ್ಲಿ ನನ್ನ ಮನಸ್ಸಿನೊಳಗೇ ಹೂತುಹೋಗುತಿತ್ತು. ಇದಕ್ಕೆ ನಮ್ಮ ಹಡಪದವರ "ಅಲೆಗಳು" ಎಂಬುದೂ ಮಣಿಯವರ "ಒಂದು ನೆರಳು" ಮತ್ತು ಧನಲಕ್ಷ್ಮೀಯವರ 'ಸೃಷ್ಟಿ' ಉದಾ : ಗಳಾಗಬಹುದು. ಆದರೆ ಈ 'ಶಿವ' (ಕೆ. ಟಿ. ಶಿವಪ್ರಸಾದ್) ಮತ್ತು ಮುನೀರ್ (ಮುನೀರ್ ಜೆಹಾನ್) ರ ಚಿತ್ರಗಳು ಈ ಟಿಪ್ಪಣಿಗೆ ಕಾರಣಗಳಾಗಿವೆ.

ಇವರಿಬ್ಬರು ಜೆ. ಜೆ. ಸ್ಕೂಲ್ ಆಫ್ ಆರ್ಟ್-ಇಂದ ತರಬೇತಿ ಪಡೆದು ಬಂದವರು. ಈವರೆಗಿನ ಅನೇಕರಂತೆ ಮತ್ತು ಹಲವರು ಪ್ರಸಿದ್ಧ ತರುಣರಂತೆ ಹಡಪದ ಮಾಸ್ತರರ ಸಹೃದಯಕ್ಕೆ ದಕ್ಕಿದವರು ಉತ್ತೇಜನವನ್ನು ಪಡೆದವರು.

ಶಿವ ಮತ್ತು ಮುನೀರ್ ಇಬ್ಬರು ನೀಡಿರುವ ಚಿತ್ರಗಳ ಸಂಖ್ಯೆ ಹೆಚ್ಚಿನದಲ್ಲ ಆದರೆ ಮೌಲಿಕವಾಗಿ ಅಚ್ಚರಿಯನ್ನುಂಟುಮಾಡುವಂಥವು. ವೆಂಕಟಪ್ಪ ಆರ್ಟ್ ಗ್ಯಾಲರಿಯೊಂದರಲ್ಲಿ ಕೇವಲ 17 ದೂತ್ರ. ಅದರಲ್ಲೂ ಶಿವಪ್ರಸಾದ್ ಚಿತ್ರಗಳು ಆರು ಮಾತ್ರ ಇದ್ದವು ಇವುಗಳಲ್ಲಿ "ಪಾರ್ವತಿ" ಯನ್ನು ಮೆಚ್ಚಿಕೊಳ್ಳುವ ಯಾವ ಪ್ರಜ್ಞಾವಂತರೂ ಇರಲಾರರು ಇದರ ಜೊತೆಗೆ ಮನಸೆಳೆಯುವ "ಕೆಂಚಪ್ಪ" ಮತ್ತು "ಮಟನ್ ಸ್ಟಾಲ್" ಸೇರಿದ್ದರೆ ಒಳ್ಳೆಯದು. ಇಲ್ಲಿ "ಶಿವ" ಲೈಫ್ ಸೈಜಿಗೆ ಹತ್ತಿರ ಹತ್ತಿರದ ಚಿತ್ರಣವನ್ನು ಖಚಿತವಾದ ಬಣ್ಣಗಳಲ್ಲಿ (ತೈಲವರ್ಣಗಳು) ಸಾಧಿಸಿದ್ದಾರೆ "ಪಾರ್ವತಿ" ಚಿತ್ರದ ಪರಿಣಾಮವನ್ನು ಇನ್ನು ಮೇಲೆ ಅನುಕರಣೆಗೂ ತೆಗೆದುಕೊಳ್ಳಬಹುದು. ಹಾಗೆ ಇದೆ. ಕಂಬದ

ಹಿಂಪಿನಿಂದ ಲೋಕವನ್ನು ತೀಕ್ಷಣವಾಗಿ ನೋಡುತ್ತಾ ಕೂಡಲೆ ಹೊರಳಿ ಬಲ ಕಣ್ಣಿಂದ ಪರೀಕ್ಷಿಸಿದಂತೆ ಮಾಡಿ ಮತ್ತೆ ಹೊರಳಿ ನಿಲ್ಲುವ ಒಂದು ಮುಖದ (ಹೆಣ್ಣು) ಸುಹಾಶೀತವಾಗಿ ಒಂದು ಭಾವಗೀತೆಯಂತೆ ವರ್ತಿಸುತ್ತದೆ ಇಡೀ ಕ್ರಿಯೆಯಿಂದ ಕೂಡಿದ ಈ ಚಿತ್ರ ಯಾವ ಅಂಶವಲ್ಲೂ ಪರಕೀಯವಾಗುವುದಿಲ್ಲ. ಇನ್ನು ಮಟನ್ ಸ್ಟಾಲ್-ತೂಗು ಬಿಟ್ಟಿರುವ ಮೂರು ಮಾಂಸದ ಹಂದರಗಳ ನೆರಳು ಎಡಗಣ್ಣಿನ ಮೇಲೆ ಬಿದ್ದು ಲೋಕಕ್ಕೆ ಆ ವ್ಯಾಪಾರಿಯ ಬಲ ಕಣ್ಣು ಮಾತ್ರ ತೆರೆದಿರುವಂತೆ ಅನ್ನಿಸಿ ಹಿಡಿದು ನಿಲ್ಲಿಸಬಲ್ಲ ಚಿತ್ರಣದಲ್ಲಿ "ಶಿಪ''ಕ್ರಿಟಿಕಲ್ ರಿಯಲಿಸಂ - "ಮನಸೆಳೆಯುತ್ತದೆ'' ಕೆಂಚಪ್ಪನ ಚಿತ್ರವನ್ನು ಕಂಡು ನಾನು ಬೆರಗಾದೆ ನಿಜ. ಅದು ಸೊಂಟದಿಂದ ಮೇಲಕ್ಕೆ ಕಾಣುವ ಕಂಬಳಿಯನ್ನು ಹೊದ್ದು ತಲೆಗೆ ಲಪ್ಪಟ್ಟೆಸುತ್ತಿದಂತಿರುವ ಒಬ್ಬ ಹಳ್ಳಿಯವನ ಚಿತ್ರ ಹೊದ್ದಿಕೆಯನ್ನೂ ಸರಿಸುತ್ತಿರುವಂತೆ ಭಾಸವಾಗುತ್ತದೆ. ಚಿತ್ರಕಾರರನ್ನು ಕೇಳಿದಾಗ "ಆತ ನಿನು ಬಲಶಾಲಿಯಾದ ವ್ಯಕ್ತಿ ಎಂದು ನನ್ನೆಡೆ ನೋಡಿದರು. ತಮ್ಮ ಚಿರಪರಿಚಿತ ಹಿರಿಯ ಹಳ್ಳಿಯವ (ಕನ್ನಡಿಗ ಮನುಷ್ಯ ಪ್ರಾಣಿ) ಇಲ್ಲಿ ಗಟ್ಟಿಮುಟ್ಟಾಗಿ ನಿಂತಂತೆ ಕಾಣುತ್ತದೆ. ಉಳಿದ ಚಿತ್ರಗಳು (ಅವರಲ್ಲೂ ''ನಾಸೀಮ್ ಮತ್ತು ಅವಳ ತಾಯಿ'') ಇಂಥದೇ"ಕ್ರಿಟಿಕಲ್ ರಿಯಲಿಸಂ'' ವರ್ಗಕ್ಕೆ ಸೇರಿದ ಕೃತಿಗಳಾಗಿವೆ. ಇವುಗಳ ಹಿಂದಿನ ಚಿತ್ರಕಾರ ಶಿವಪ್ರಸಾದ್.

ಮುನೀರ್ ಅವರು 'ವುಡ್‌ಕಟ್' ಗಳಲ್ಲಿ ನಿಸ್ಸೀಮರೆಂದು ತೋರುತ್ತದೆ. ಅವರ ಹನ್ನೊಂದು ಕೃತಿಗಳಲ್ಲಿ "ಗ್ರೀನ್ ಲೈಫ್'' ಮತ್ತು "ರಿಫ್ಲೆಕ್ಷನಿಸ್ಟ್" ಎಂಬ ಎರಡಂತೂ ತುಂಬ ಆಕರ್ಷಕವಾಗಿವೆ. ತೆಳು ಹಸುರಿನ ವರ್ಣದಲ್ಲಿ 'ವುಡಕಟ್' ಚಿತ್ರಣವನ್ನು ತೋರಿಸುವುದರಲ್ಲಿ ಒಂದು ಬಗೆಯ ಆತ್ಮೀಯತೆಯನ್ನು ಈ ಕಲಾವಿದೆ ಸಾಧಿಸುತ್ತಾರೆ. ಬೆಟ್ಟ ಸಾಲುಗಳಂತೆ ಕಾಣುವಲ್ಲಿ ನಡುವೆ ಅದರ ಹೃದಯದಂತೆ ಅರಳಿಸಿದ ಒಂದು ಸರಳ ಸುಂದರ ಹೂವಿಂದಾಗಿ 'ಗ್ರೀನ್ ಲೈಫ್' ಶೋಭಿಸಿದರೆ ನೀರಿನಲ್ಲಿ ಮತ್ತು ಮುಗಿಲಿನಲ್ಲಿ ಪ್ರತಿಬಿಂಬದಂತೆ ಬೆಳೆಯುತ್ತಾ ಹೋಗುವ (ಚಿತ್ರದ ಕೆಳಗೆ ಮತ್ತು ಮೇಲೆ) ಎರಡು ಹರಹಿಗೆ ನಮ್ಮ ನೋಟವನ್ನು ತೂಗಿಸಬಲ್ಲ 'ರಿಫ್ಲೆಕ್ಷನಿಸ್ಟ್'' ಚಿತ್ರವಿದೆ. ಹೀಗೆ ಚಿತ್ರಗಳಿಂದ ಪ್ರೇಕ್ಷಕನನ್ನು ಸೆರೆಹಿಡಿಯುವುದಲ್ಲದೆ ಅಂಥವರ ಆಸಕ್ತಿಯೆಲ್ಲ ಹಸುನಾಗಿ ಅಥವಾ ಜೀವಂತವಾಗಿ ಉಳಿಯುವ ಶಕ್ತಿ ಇವರಿಬ್ಬರಲ್ಲೂ ಒಂದು ಸಾಮಾನ್ಯ ಲಕ್ಷಣವಾಗಿದೆ.

ಆದುದರಿಂದ ಕನ್ನಡದ ಈ ಚಿತ್ರಕಾರರು ಇನ್ನು ಮುಂದೆ ಕೂಡ ಭಾರತೀಯ ಚಿತ್ರಕಾರರಲ್ಲಿ ಹೆಸರಾಗಿ ಉಳಿಯುವವರಿದ್ದಾರೆ ಎಂಬ ಭರವಸೆಯುಂಟಾಗುತ್ತದೆ. ಇವರು ಬಳಸುವ ಬಣ್ಣಗಳು ಇವರ ಚಿತ್ರಣದ ಟೆಕ್‌ನಿಕ್ ಸರಿಯಲ್ಲದಿದ್ದರೆ ಇಂಥ ಪರಿಣಾಮವೇನು ಅಗುತ್ತಿರಲಿಲ್ಲ-ಬ್ರಷ್ ಆದರೇನು, ಪೆನ್ ನೈಫ್ ಆದರೇನು, ಪ್ಯಾಲೆಟ್ ಇಲ್ಲದಿದ್ದರೂ ಸರಿಯೆ ಚಿತ್ರಣ ಮಾತ್ರ ಮುಖ್ಯ .ಕೊನೆಗೂ ಉಳಿಯುವುದು"ಚಿತ್ರ''ಗಳೆಂಬುದನ್ನು ಈ ಸಂಧರ್ಭದಲ್ಲ ಒತ್ತಿಹೇಳ ಬಯಸುತ್ತೇನೆ.

# ದುಂಡಿರಾಜರ ಪಾಡ್ಯ, ಬಿದಿಗೆ ತದಿಗೆ

—ಡಾ|| ಎಲ್. ಎ. ಸೂರ್ಯನಾರಾಯಣ

ಕೆಲವು ವರ್ಷಗಳ ಹಿಂದೆ ಅದರಲ್ಲೂ ದಿನಕರ ದೇಸಾಯಿಯವರು ಬದುಕಿದ್ದಾಗ, ಕನ್ನಡ ಸಾಹಿತ್ಯ ನಿಯತಕಾಲಿಕಗಳಲ್ಲಿ ಅದರಲ್ಲೂ ದೀಪಾವಳಿ ಉಗಾದಿ ವಿಶೇಷ ಸಂಚಿಕೆಗಳಲ್ಲಿ ನಮ್ಮ ಗಮನವನ್ನು ಮೊಟ್ಟ ಮೊದಲಿಗೆ ಸೆಳೆಯುತ್ತಿದ್ದುದು ಚುಟುಕಗಳು. ಇತ್ತೀಚೆಗೆ ಚುಟುಕಗಳ ಸ್ಥಾನವನ್ನು ಹನಿಗವನಗಳು ಆಕ್ರಮಿಸಿಕೊಂಡಿವೆ. ಚುಟುಕಗಳಿಗೂ ಹನಿಗವನಗಳಿಗೂ ವ್ಯತ್ಯಾಸವಿದೆ. ಚುಟುಕಗಳು ನಾಲ್ಕು ಸಾಲಿನ ಅಂತ್ಯಪ್ರಾಸವನ್ನು ಬಹುಮಟ್ಟಿಗೆ ಕಡ್ಡಾಯವಾಗಿ ಹೊಂದಿದ ಮಾದರಿಗಳು. ಸಾಮಾನ್ಯವಾಗಿ ಇವುಗಳ ವಸ್ತು ಸಾಮಾಜಿಕ ಹಾಗು ರಾಜಕೀಯ ವಿಡಂಬನೆ. ಇಲ್ಲಿ ರಚನಾಕಾರನ ಮಾತಿನ ಮೊನಚು ಮುಖ್ಯ. ಆಗಾಗ ನವಿರಾಗಿ ಹಾಸ್ಯವು ಬಂದರೂ ಆದು ವಿಡಂಬನೆಯ ಒಂದು ಪ್ರಕಾರವಾಗಿಯೇ ಕಾಣಿಸಿಕೊಳುವುದು. ಹನಿಗವನಗಳು ಆಕಾರದಲ್ಲಿ ಚುಟುಕಗಳಂತೆ ಚಿಕ್ಕದಾದರೂ ಅವುಗಳಿಗೆ ತಮ್ಮದೇ ಆದ ವಿಶಿಷ್ಟತೆಯಿದೆ. ಇವು ನಾಲ್ಕು ಸಾಲಿಗೇ ಸೀಮಿತವಾಗಬೇಕೆಂದಿಲ್ಲ. 7–8 ಸಾಲುಗಳವರೆಗೂ ಮುಂದುವರಿಯಬಹುದು. ಚುಟುಕಗಳಂತೆ ಸಾಮಾಜಿಕ, ರಾಜಕೀಯ ವಿಡಂಬನೆಗಳಿಗೇ ಮೀಸಲಾಗದೆ ಕವಿಯ ವೈಯಕ್ತಿಕ ಅನುಭಾವಗಳೂ ಬಾವಲಹರಿಗಳೂ ಇಲ್ಲಿ ವಸ್ತುವಾಗಬಲ್ಲವು. ಮಾತಿನ ಮೊನಚು, ವ್ಯಂಗ್ಯ, ವಿಡಂಬನೆ, ಹಾಸ್ಯಗಳಿಗೇ ಇಲ್ಲೂ ಪ್ರಾಧಾನ್ಯ ಹಾಗೂ ದೊಡ್ಡ ಕವನಗಳಿಂದ ನಿರೀಕ್ಷಿಸುವ ಭಾವತೀವ್ರತೆ, ಆನಂದಾನುಭವಗಳನ್ನು ಇವುಗಳಿಂದ ನಿರೀಕ್ಷಿಸುವುದು ತರವಲ್ಲ. ಒಟ್ಟಿನಲ್ಲಿ ಇಲ್ಲಿ ಭಾವತೀವ್ರತೆಗಿಂತ ಬುದ್ಧಿಯ ಕಸರತ್ತಿಗೆ ಹೆಚ್ಚು ಗಮನ.

ಮೇಲಿನ ಈ ನಿಲುವನ್ನು ಹನಿಗವನದ ಸೃಷ್ಟಿಯನ್ನು ಕುರಿತು ಕವಿಯ ಈ ಪದ್ಯವು ದೃಢೀಕರಿಸುತ್ತದೆ :—

---

ಪಾಡ್ಯ, ಬಿದಿಗೆ, ತದಿಗೆ, ಹೆಚ್. ದುಂಡಿರಾಜರ
80 ಹನಿಗವನಗಳನ್ನೊಳಗೊಂಡ ಪುಟ್ಟ ಕೃತಿ.

---

ಡಾ|| ಎಲ್. ಎ. ಸೂರ್ಯನಾರಾಯಣ, ನಂ. 5. ವಿದ್ಯಾಪೀಠ ಸರ್ಕಲ್, ತ್ಯಾಗರಾಜನಗರ,
ಬೆಂಗಳೂರು-28

ಸೃಷ್ಟಿಸುವ ಬಯಕೆ,
ಉದ್ವೇಗ, ಉದ್ರೇಕಕ್ಕೆ,
ಅನುಭವದ ಕಡಿವಾಣ
ಇರದಿದ್ದ ಕಾರಣ
ಅನಿರೀಕ್ಷಿತ
ಶೀಘ್ರ ಸ್ಖಲನ
ಹನಿಗವನ.

ದುಂಡಿಯವರ ಹನಿಗವನಗಳಲ್ಲಿ ಎದ್ದು ಕಾಣುವ ಗುಣವೆಂದರೆ ಮಾತಿನ ಜಾಣ್ಮೆ ಬೌದ್ಧಿಕ ಕಸರತ್ತು ಕೊಂಕು ನೋಟ ವಿಡಂಬನೆಗಳು, ಹಾಗಾಗಿ ಇಲ್ಲಿಯ ಬಹುಪಾಲು ಕವನಗಳು ಪ್ರಜ್ಞಾಪೂರ್ವಕ ರಚನೆಗಳಾಗಿ ಎದ್ದು ಕಾಣುತ್ತವೆ.

ಈ ಸಂಕಲನದ ಕವನಗಳನ್ನು ಮೂರು ನಾಲ್ಕು ವಿಭಾಗಗಳಲ್ಲಿ ವಿಂಗಡಿಸಬಹುದು. ಒಂದು ಕೇವಲ ಹಾಸ್ಯ ಚಟಾಕಿಯನ್ನೊಳಗೊಂಡಂತಹವು :—

ಉದಾಹರಣೆಗೆ ಮಾತ್ರೆ ಎಂಬ ಈ ಪದ್ಯ :

"ರಮ್ಯಕರಿ ಹೇಳುತ್ತಿದ್ದ
ಹೀಗಿದೆ ನನ್ನ ಕವನ
ಐದು ಮಾತ್ರೆಗಳ
ನಾಲ್ಕು ಗಣ
ಮರುನುಡಿದ
ನವ್ಯ ಕವಿ ತಕ್ಷಣ
"ನನ್ನ ಕಾವ್ಯಕ್ಕೆ
ಸಾಕು ಒಂದೇ ಮಾತ್ರೆ
ತಲೆನೋವು
ಸಂಪೂರ್ಣ ಗುಣ",

ಎರಡನೆಯದು ಕೇವಲ ಹಾಸ್ಯಕ್ಕಿಂತ ಭಿನ್ನವಾಗಿ ತನ್ನ ವಿಡಂಬನೆ, ಚತುರೋಕ್ತಿಗಳಿಂದ ಚುಚ್ಚಿ ಟೀಕೆಗೆ ಒಳಗಾದವರು ತಲೆಕೆರೆದುಕೊಳ್ಳುವಂತೆ ಮಾಡುವ ಪದ್ಯಗಳು. ಉದಾಹರಣೆಯಾಗಿ ನಮ್ಮೂರ ಶಾಲೆ ನೋಡಬಹುದು,

ಮೂರನೆಯದು ಪದಗಳನ್ನು ಶಬ್ದ ಗುಂಫನಗಳನ್ನು ಒಡೆದು ಹೊಸ ಅರ್ಥವನ್ನು ಶ್ಲೇಷಹಾಸ್ಯವನ್ನು ಹೊರಹೊಮ್ಮಿಸುವ ಪ್ರಯತ್ನ. ಎಲ್ಲೆಲ್ಲಿ ಅಪ್ರಯತ್ನವಾಗಿ ಈ ಕ್ರಿಯೆ ನಡೆಯುವುದೋ ಅಲ್ಲಿ ಸಹಜತೆಯಿದೆ, ನೇರ ನಡೆಯಿದೆ, ಎಲ್ಲೆಲ್ಲಿ ಪ್ರಯತ್ನ

ಪೂರ್ವಕವಾಗಿ ಹಿಂಜುವ ಕೆಲಸ ಸಾಗಿದೆಯೊ ಅಲ್ಲೆಲ್ಲ ಕಚಗುಳಿ ಇಟ್ಟು ನಗೆಸಿದಂತಾಗಿದೆ. ಚರಿತ್ರೆ, ಸಾಧನೆ, ಪ್ರತಿಕ್ರಿಯೆ, ಅವಲಕ್ಕಿ, ಸ್ಪರ್ಧೆ, ಅಭಿಪ್ರಾಯ ನಾವು ಇವುಗಳು ಮೇಲಿನ ಎರಡೂ ಬಗೆಯ ಪ್ರಯತ್ನಕ್ಕೆ ನಿದರ್ಶನಗಳಿವೆ.

ಮತ್ತೊಂದು ಬಗೆಯೆಂದರೆ ಬದಲಾವಣೆ, ಕ್ಯಾಲೆಂಡರ್, ತಿದ್ದುಪಡಿ ಇತ್ಯಾದಿ ಪದ್ಯಗಳಲ್ಲಿ ಇಂಗ್ಲಿಷ್ ಪದಗಳನ್ನು ಬಳಸಿಕೊಂಡು ಪರಿಣಾಮಕಾರಿಯಾಗಿ ಮಾಡಿರುವ ಶ್ಲೇಷ, ಫನ್‌ಗಳು ಕ್ಯಾಲೆಂಡರ್ ಇಂಗ್ಲಿಷ್ ಕ್ಯಾಲೆಂಡರಿನಲ್ಲಿ ಮೊದಲ ಎರಡು ತಿಂಗಳ ಅಂತ್ಯದಲ್ಲಿ 'ಸರಿ' ಕೊನೆಯ ನಾಲ್ಕು ತಿಂಗಳ ಮುಕ್ತಾಯ "ಬರ"ದಲ್ಲಿ.

ಆದರೆ ಎಲ್ಲ ತಿಂಗಳ ಕೊನೆಯಲ್ಲಿ 'ಬರ' ಅಥವಾ 'ಪರಿ ಬಡ ನೌಕರನ ಬದುಕಿನಲ್ಲಿ. ಇಲ್ಲಿಯ ಚತುರೋಕ್ತಿ, ಬುದ್ಧಿಯ ಕಸರತ್ತು ಹಿಂದು ಕ್ಷಣ ಬೆರಗುಗೊಳಿಸಿದರೂ ಕವಿ ಇಂಥವೇ ಪದ್ಯಗಳನ್ನು 'ಬರ'ದಲ್ಲಿ ನಿಜವಾಗಿಯೂ 'worry' ಆಗುತ್ತದೆ. ಇದೇ ಸಂದರ್ಭದಲ್ಲಿ ಶ್ರೀ ಎಚ್. ಎಸ್. ರಾಘವೇಂದ್ರರಾವ್ ಅವರು ಶ್ರೀ ಲಕ್ಷ್ಮಣ ರಾವ್‌ರವರ ಕಾವ್ಯ ಒಂದೆರಡು ಸಂಗತಿಗಳು ಎಂಬಲ್ಲಿ ಪ್ರಾಸಂಗಿಕವಾಗಿ ಹೇಳಿದ "ಅತಿ ಸರಳ ಗೇಯ, ಲಯಪ್ರಾಸ ಮತ್ತು ಚಮತ್ಕಾರಗಳನ್ನು ಅವಲಂಬಿಸಿದ ರಂಜಕವಾದ ಆ ಕಾವ್ಯವು ಜನಪ್ರಿಯತೆಯನ್ನು ಪಡೆಯುತ್ತಿದೆ. ಎಂಬ ಮಾತುಗಳು ಗಮನಾರ್ಹ. (ಅಂಕಣ ಮೇ-ಜೂನ್ 1985) ಈ ಹಿನ್ನೆಲೆಯಲ್ಲಿ ಶ್ರೀ ದುಂಡಿಯವರು ಕೇವಲ ಚಮತ್ಕಾರ, ರಂಜಕೋಕ್ತಿಗಳಷ್ಟರಿಂದಲೇ ತೃಪ್ತರಾಗದೆ ಹೃದಯ ಸ್ಪಂದಿಯಾದ ಕಾವ್ಯಾತ್ಮಕ ನಿರೂಪಣೆಯತ್ತ ಗಮನವನ್ನು ಪ್ರಜ್ಞಾಪೂರ್ವಕವಾಗಿ ಕೇಂದ್ರಿಕರಿಸಿ ನಿಜವಾಗಿಯೂ ಒಳ್ಳೆಯ ಕಾವ್ಯವನ್ನು ಕೊಡಬಲ್ಲರೆಂಬುದಕ್ಕೆ ಈ ಕೆಳಗಿನ ಪದ್ಯವೇ ಸಾಕ್ಷಿ ;—

ನಾವು ಬಸ್ ಮೇಲೆ ಹೋದ್ರೆ<br>
ಪ್ರಯಾಣ ಆಗುತ್ತೆ<br>
ಬಸ್ ನಂ ಮೇಲೆ ಹೋದ್ರೆ<br>
ಪ್ರಾಣ ಹೋಗುತ್ತೆ<br>
ಹೆಂಗಸರು ಗಂಡ ಸತ್ರೆ<br>
ವಿಧವೆ ಆಗ್ತಾರೆ,<br>
ಗಂಡಸರು ಹೆಂಡ್ತಿ ಸತ್ರೆ<br>
ಮದುವೆ ಆಗ್ತಾರೆ,

ಇಲ್ಲಿ ಮೇಲು ನೋಟಕ್ಕೆ ಕೇವಲ ಮಾತಿನ ಚಮತ್ಕಾರವಿರುವಂತೆ ಕಂಡರೂ

ಆಳವಾಗಿ ನೋಡಿದಾಗ ಇಡೀ ಸ್ತ್ರೀ ಸಮುದಾಯಕ್ಕೆ ಆಗುತ್ತಿರುವ ಅನ್ಯಾಯ ವಿಪರ್ಯಾಸಗಳನ್ನು ಕಂಡು ನೋವು ಸಾಮಾಜಿಕ ಕಳವಳ ಎದ್ದು ಕಾಣುತ್ತಿದೆ.

ಪಾಡ್ಯ ಬಿದಿಗೆ ತದಿಗೆಯನ್ನು ಮುಗಿಸುತ್ತ ಒಂದು ಮಾತು ಹೇಳಬೇಕು, ಈ ಸಂಗ್ರಹದಲ್ಲಿ ಸಿಂಹಪಾಲು ಕಾಮಪ್ರೇಮಗಳನ್ನು ಕುರಿತ ಪದ್ಯಗಳು.

**ಮಳೆ :**

'ಒಂದರ ಹಿಂದೆ ಒಂದು ರಿಲೆ ಹಿಡಿದು ಬರುವ ಮಳೆಗಳಿಗೆಯೊಳಗೆ ಮೋರಿ ತುಂಬಿ ಬೀದಿಯಾಗುತ್ತದೆ ಹೊಳೆ 'ಒಂದು ಸುಂದರ ಪ್ರಕೃತಿ ಚಿತ್ರಣವನ್ನು ಕೊಡುವ ಪದ್ಯ ಕವಿಯು ಪ್ರಜ್ಞಾ ಪೂರ್ವಕವಾಗಿ 'ಸೀತೆ ಸಾವಿತ್ರಿಯರಂಥ ಸಾಧ್ವಿಯರೇ ಬಂದರೂ ಎತ್ತಬೇಕು ಸೀರೆ ಮೊಣಕಾಲಿಗಿಂತ ಮೇಲೆ ಎಂದು ಹೇಳುತ್ತಿದ್ದಂತೆಯೇ ತನ್ನ ಮೊದಲಿನ ಸೌಂದರ್ಯವನ್ನೆಲ್ಲ ಕಳೆದುಕೊಂಡು ಅತಿ ಸಾಮಾನ್ಯ ಕಳಪೆ ಚಿತ್ರವಾಗಿಬಿಡುತ್ತದೆ. ಕವಿ ಇಂಥೆಡೆ ಸಂಯಮದ ಕಡಿವಾಣವನ್ನು ಉದ್ದೇಶಪೂರ್ವಕ ಮಾಡುವ ಫನ್‌ಗಳನ್ನು ನಿಲ್ಲಿಸಿದರೆ ಉತ್ತಮ ಚಿತ್ರಗಳನ್ನು ಕೊಡಬಲ್ಲರು. ಕವಿ ಇವುಗಳಂತೆಯೇ ಬೇರೆ ವಿಷಯಗಳನ್ನು ಕುರಿತ ಪದ್ಯಗಳನ್ನು ಬರೆಯುವುದೂ ಲೇಸು.

ಮುಕ್ತಾಯದಲ್ಲಿ ಇಷ್ಟು ಹೇಳಲೇಬೇಕು, ಪಾಡ್ಯ, ಬಿದಿಗೆ, ತದಿಗೆ ಬರುತ್ತಾ ಹೋದಂತೆ ಹುಣ್ಣಿಮೆಯ ಹಾಲು ಬೆಳದಿಂಗಳನ್ನು ಚೆಲ್ಲುವಂತೆ ಮನಸ್ಸನ್ನು ಮುದಗೊಳಿಸುವ ಆಹ್ಲಾದಕರ ಪದ್ಯಗಳನ್ನು ಒಳಗೊಂಡ ಹಾಗೆಯೇ ಕೃಷ್ಣಪಕ್ಷದ ಪಾಡ್ಯ ಬಿದಿಗೆ ತದಿಗೆ ಅಮಾವಾಸ್ಯೆಯ ಕತ್ತಲಿನಲ್ಲಿ ತಬ್ಬಿಬ್ಬು ಮಾಡುವಂಥ ಪದ್ಯಗಳೂ ಇವೆ.

ಅವಳ ಮನ. ಹುಣ್ಣಿಮೆ, ಗಡಿಯಾರ, ಸೂರ್ಯ, ಕವಿತೆ, ಬೊಜ್ಜು, ಕಮಲಾಕ್ಷಿ ಇವುಗಳಲ್ಲಿ ಪರಿಣತ ಕಾವ್ಯ ಕೌಶಲವನ್ನು, ಧ್ವನಿ ರಮ್ಯತೆಯನ್ನು ಕಲ್ಪನಾವಿಲಾಸವನ್ನು ಕಾಣುತ್ತೇವೆ. ಇಂಥೆಡೆ ಇವು ನಿಜಕ್ಕೂ 'Honey ಗವನಗಳಾಗಿವೆ' !



# ಕನಸಿಗೊಂದು ಕಣ್ಣು

ರಮೇಶ್ ಬಂದಗದ್ದೆ

ಸೆಂಟ್ರಲ್ ಕಾಲೇಜ್, ನನಗೆ ಅತ್ಯಂತ ಪ್ರಿಯವಾದ ಕಾಲೇಜ್. ಓದುವುದನ್ನು. ಮನುಷ್ಯರನ್ನು ತಿಳಿಯುವುದನ್ನು ಕಲಿಸಿದ ಕಾಲೇಜ್. ನಾನಾ ರೀತಿಯ ಜನರನ್ನು ಪರಿಚಯ ಮಾಡಿಕೊಟ್ಟ ಕಾಲೇಜ್. ಅನೊಂದು ದಿನ ಲಂಕೇಶಪ್ಪ (ಆಗ ಲಂಕೇಶ್ ಆಗಿರಲಿಲ್ಲ) ತರಗತಿಗೆ ಬಂದವರೇ ಸಮಾಜವಾದದ ನಡುವೆ ಲೋಹಿಯಾ, ನೆಹರೂ, ರಾಜಗೋಪಾಲಚಾರಿ, ಗಾಂಧೀಜಿ ಮುಂತಾದವರ ಬಗ್ಗೆ ಪಾಠಮಾಡಿದ್ದರು. ಮೇಸ್ಟ್ರ ಹತ್ತಿರ, ಸಮಾಜವಾದಿ ಪಕ್ಷದ ವಿಳಾಸ ಪಡೆದು ಮಾರನೆಯ ದಿನ ಪಕ್ಷದ ಕಚೇರಿ ಹುಡುಕಿಕೊಂಡು ಹೋದೆ. ಅಲ್ಲಿಯವರೆವಿಗೆ ಕುದುರೆ ಆಟದ (ರೇಸ್‌ಕೋರ್ಸ್) ರಸ್ತೆಯಲ್ಲಿರುವ ಕಾಂಗ್ರೆಸ್ ಪಕ್ಷ ಮಾತ್ರ ಗೊತ್ತಿತ್ತು. ಕಾಂಗ್ರೆಸ್ ಎಂದರೆ ಭಾರತ, ಭಾರತ ಎಂದರೆ ಕಾಂಗ್ರೆಸ್ ಎಂದು ತಿಳಿದಿದ್ದ ಕಾಲ. ಅಥವಾ ಆ ರೀತಿಯ ತಿಳುವಳಿಕೆಯ ಹಿನ್ನೆಲೆಯಿಂದ ಬಂದವನು ನಾನು. ಈಗಲೂ ನೆನಪಿದೆ ಶಾಲೆಯಲ್ಲಿ ಮೇಸ್ಟ್ರು ಗಾಂಧೀಜಿಯವರನ್ನು ಕೃಷ್ಣಾವತಾರವೆಂದು ನೆಹರೂರವರನ್ನು ಅರ್ಜುನನೆಂದು ಸದಾ ಹೇಳುತ್ತಿದ್ದುದು.

ಸಮಾಜವಾದಿ ಪಕ್ಷದ ಕಚೇರಿಯ ಒಳಹೊಕ್ಕಾಗ ನನಗಿಂತ ಸೊಣಕಲಾಗಿದ್ದ ವ್ಯಕ್ತಿ ಕೂತಿತ್ತು. ನನ್ನ ಪರಿಚಯ ಮಾಡಿಕೊಂಡು (ಆಗ ನಾನು ಶೂದ್ರ ಆಗಿರಲಿಲ್ಲ) ಸಮಾಜವಾದಿ ಪಕ್ಷದ ಬಗ್ಗೆ ಕರಪತ್ರಗಳನ್ನು ಪಡೆದೆ ಅನ್ನಿಸುತ್ತೆ. ಆದರೆ ನನ್ನ ಅನ್ನ ಬಟ್ಟೆಯ ಪ್ರಶ್ನೆಯಲ್ಲಿ ಒಂದು ವರ್ಷ ಪಕ್ಷದ ಕಡೆ ಹೋಗಲಿಲ್ಲ. ಅಂದು ಕಂಡ ಆ ಸೊಣಕಲು ವ್ಯಕ್ತಿ ರಮೇಶ್‌ಬಂದಗದ್ದೆ ಎಂಬುದನ್ನು ತಿಳಿಯುತ್ತ ಹೋದೆ. 1969ರಿಂದ ಇಂದಿನವರೆವಿಗೆ ಆತ್ಮೀಯವಾಗಿ ಕಾಣುತ್ತಿರುವ ವ್ಯಕ್ತಿ.

ರಮೇಶ್ ನಾನು ನೋಡಿದ ನಾನಾ ವಿಚಿತ್ರ ವ್ಯಕ್ತಿಗಳಲ್ಲಿ ಒಬ್ಬರು. ಸಿಡುಕುತನ-ನಗು-ಹಾಸ್ಯದ ನಡುವೆ ಕರಗಿ ಹೋಗುವಾಗಲೆಲ್ಲ ಈ ಮನುಷ್ಯನನ್ನು ಸ್ಕೇಲ್ ತೆಗೆದು ಕೊಂಡು ಉದ್ದ ಮತ್ತು ಗಾತ್ರವನ್ನು ಅಳೆಯುವುದು ಕಷ್ಟ ಎಂದುಕೊಂಡಿದ್ದೇನೆ. ಪಕ್ಷದ ಕಚೇರಿಯಲ್ಲಿ ಊಟಮಾಡಿಯೋ, ಮಾಡದೆಯೋ ವೃತ್ತ ಪತ್ರಿಕೆಗಳನ್ನು ಹಾಸಿಗೆಯನ್ನಾಗಿ ಮಾಡಿಕೊಂಡು, ಲೋಹಿಯಾರವರ 'ಮ್ಯಾನಿಫೆಸ್ಟೋ'ವ್‌ನಲ್ಲಿ ಕರಗಿಹೋದವರು. ಸಮಾಜವಾದ, ಸೇವೆ, ಹೋರಾಟ ಇವೆಲ್ಲ ಬದುಕಿನ ಗುಣಾತ್ಮಕ ಮೌಲ್ಯವೂ ಇರಬಹುದು. ಒಬ್ಬ ಮನುಷ್ಯ ರ್‍ಯಾಡಿಕಲ್ ಅಥವಾ ರ್‍ಯಾಷನಲಿಸ್ಟ್ ಆಗಿರುವುದೇ ಅವನ ಜಡತ್ವದಿಂದ ಬಿಡುಗಡೆಯ ಸಂಕೇತವಾಗಿರುತ್ತೆ. ಕಳೆದ ವಾರ ಎಂದೋ ಲಂಕೇಶ್‌ರವರಿಗೆ ಬರೆದ 'ಸಂಕ್ರಾಂತಿ' ನಾಟಕಕ್ಕೆ ಸಂಬಂಧಿಸಿದ ಲೇಖನ ತೋರಿಸಿ "ಶೂದ್ರ ನಾನು ಬರೆಯಬಲ್ಲನಾ ?" ಎಂದಾಗ ಯಾಕಾಗಬಾರದು ಎಂದಿದ್ದೆ. ಕ್ರಿಯಾಶೀಲತೆಯ ಮೂಲಕ ವಿವಿಧ ರೀತಿಯ ಅನುಭವಗಳನ್ನು ಪಡೆಯಲು ಸಾಧ್ಯ ವಿರುತ್ತೆ. ಈ ದೃಷ್ಟಿಯಿಂದ ರಮೇಶ್‌ರಂಥವರನ್ನು ನೋಡಿದಾಗ ಖುಷಿಯಾಗುತ್ತೆ. ಮನುಷ್ಯನ ಸೋಲು ಗೆಲುವುಗಳನ್ನು ಬದಿಗೆ ಸರಿಸಿ ನಿರಂತರ ದುಡಿಮೆಯೇ ಪ್ರಧಾನ ವಾಗುವುದು ಇಂಥ ಸಂದರ್ಭದಲ್ಲಿಯೇ.

ಗಾಂಧೀಜಿ, ಜೆ. ಪಿ. ಮತ್ತು ಲೋಹಿಯಾ ಮುಂತಾದವರ ಬಗ್ಗೆ ಯಾರೇ ಅಸಡ್ಡೆಯಿಂದ ಮಾತಾಡಿದರೂ ಸಹಿಸದ ಇವರು ವಾದಕ್ಕಿಳಿಯುವುದೇ ಜಾಸ್ತಿ. ರಮೇಶ್‌ರವರು ಅತ್ಯಂತ 'ವಾದ' ಪ್ರಿಯರು. (ನಾನು ನೋಡಿದ ಮತ್ತೊಬ್ಬ ವ್ಯಕ್ತಿ ಬಾಪು ಹೆದ್ದೂರಶೆಟ್ಟಿ) ಇಂಥವರು ಹೆಚ್ಚು ಶಾಸನ ಸಭೆಗಳಲ್ಲಿಯೇ ಇರಬೇಕಾಗುತ್ತೆ. ರಮೇಶರವರನ್ನು ಹೆಚ್ಚು ಅರ್ಥಮಾಡಿಕೊಳ್ಳಲು ಸಾಧ್ಯವಾಗಿದ್ದು ದಿ॥ ಗೋಪಾಲ ಗೌಡರು ವಿಕ್ಟೋರಿಯ ಆಸ್ಪತ್ರೆಯಲ್ಲಿ ನರಳುತ್ತಿದ್ದಾಗ, ಗೌಡರ ಮಲಮೂತ್ರಗಳನ್ನು ಶುದ್ಧಿಮಾಡುತ್ತ (ರಮೇಶ್‌ರವರ ಜೊತೆಗೆ ಕೊಣಂದೂರು ಲಿಂಗಪ್ಪ) ಮತ್ತೆ ಅವರ ನೋವನ್ನು ಮರೆಸಲು ರಾಜಕೀಯ ಚರ್ಚೆಗೆ ಎಳೆಯುತ್ತಿದ್ದುದನ್ನು ನೆನಪು ಮಾಡಿ ಕೊಳ್ಳುವುದೇ ಸ್ಮರಣೀಯ ಸಂಗತಿ. ಗೋಪಾಲಗೌಡರು ಹುಲಿಯಂತೆ ಬದುಕಿದವರು. ರಾಜಕೀಯದಲ್ಲಿ ಹೋರಾಟ ಮತ್ತು ನಿರ್ದಾಕ್ಷಿಣ್ಯತೆ ಅಗತ್ಯ ಎಂದು ನಂಬಿ ಬದುಕಿ ದವರು. ರಮೇಶ್ ಗೌಡರ ಹೋರಾಟವನ್ನು ಮತ್ತು ದಿ॥ ಎಸ್. ವೆಂಕಟರಾಂರವರ ಶಿಸ್ತನ್ನು ರೂಢಿಸಿಕೊಂಡಿರುವುದರಿಂದ ಏನಾದರೂ ಮಾಡಬಲ್ಲರು. ಆದರೆ 'ತಾಳಿ ದವನು ಬಾಳಿಯಾನು' ಎಂಬುದನ್ನು ತಿಳಿಯಬೇಕು. ಕೊನೆಯ ಪಕ್ಷ 'ತಾಳ್ಮೆ' ಬದುಕಿ ನಲ್ಲಿ ಪ್ರೀತಿ-ಪ್ರೇಮವನ್ನು ಕೊಡಬಲ್ಲುದು. ಸಿಟ್ಟು ಮನಸ್ಸಿನ ಮತ್ತು ದೇಹದ ಉತ್ಸಾ ಹವನ್ನೇ ದುರ್ಬಲಗೊಳಿಸಲು ಸಾಧ್ಯ, (ಜನತಾ ಪಕ್ಷದ ಕಚೇರಿಗೆ ಬರುವ ಬಹಳಷ್ಟು ಮಂದಿ ಪ್ರೀತಿಯಿಂದ ರಮೇಶ್‌ರವರನ್ನು 'ಮೇಜರ್' ಇದ್ದಾರಾ ಎಂದು ಕೇಳ್ತಾರೆ.)

ಆಸ್ಪತ್ರೆಯಲ್ಲಿ ಮತ್ತೊಂದು ಸ್ವಾರಸ್ಯಕರವಾದ ಸಂಗತಿಯೆಂದರೆ; ಕೇವಲ ಲೋಹಿಯಾ ಮಾತ್ರ ಚರ್ಚೆಗೆ ಬರುತ್ತಿರಲಿಲ್ಲ. ಕುವೆಂಪು, ಗೋಪಾಲಕೃಷ್ಣ ಅಡಿಗ, ಅನಂತಮೂರ್ತಿ, ಲಂಕೇಶ್, ತೇಜಸ್ವಿ ಮುಂತಾದವರೆಲ್ಲ ಬಂದು ಹೋಗುತ್ತಿದ್ದರು. ನಮ್ಮ ಬಹಳಷ್ಟು ಸಮಾಜವಾದಿಗಳು ಸಾಹಿತ್ಯ ಮತ್ತು ಸಂಸ್ಕೃತಿಗೆ ಹತ್ತಿರವಾಗುವುದು ಈ ಕಾರಣಕ್ಕಾಗಿಯೇ ಅನ್ನಿಸುತ್ತೆ. ಗೋಪಾಲಗೌಡರು ನಡೆಯಲು ಸಾಧ್ಯವಾಗ ದಿದ್ದಾಗಲೂ; ಬೇರೆಯವರ ತೋಳಿನ ಆಶ್ರಯದಲ್ಲಿ ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲ್‌ನಲ್ಲಿ ನಡೆಯುತ್ತಿದ್ದ ಕವಿಗೋಷ್ಠಿಯಲ್ಲಿ ಭಾಗವಹಿಸಿ ಕಾವ್ಯವನ್ನು ಆಸ್ವಾದಿಸಿ ದವರು. ಇಂಥ ನಾಯಕನ ಪಕ್ಷ ತುರ್ತು ಪರಿಸ್ಥಿತಿಯಲ್ಲಿ ಗೋಡೆಕಟ್ಟಿಕೊಂಡು ಕಾಂಗ್ರೆ ಕಡೆ ಹೋಗಲು ಸಿದ್ದವಾದಾಗ ರಮೇಶ್‌ರವರು ಹೋರಾಟದ ಹಾದಿಯ ಕಡೆ ಹೋಗಲು ಆಸೆ ತೋರಿದವರು.

ಶಿವಮೊಗ್ಗ ನಮ್ಮ ಸಾಂಸ್ಕೃತಿಕ ಪರಂಪರೆಗೆ ನಾನಾ ರೀತಿಯ ಕೊಡುಗೆಯನ್ನು ಕೊಟ್ಟ ಜಿಲ್ಲೆ. ರಮೇಶ್‌ಬಂದಗದ್ದೆಯವರೂ ಅದೇ ಜಿಲ್ಲೆಯಿಂದ ಬಂದ ನಲವತ್ನಾಲ್ಕು ವರ್ಷದ ವ್ಯಕ್ತಿ. ವಿಚಿತ್ರವಾಗಿ ನರಳಿ ತಲೆಯ ಕೂದಲು ಬೆಳ್ಳಗೆ ಮಾಡಿಕೊಂಡಿದ್ದಾರೆ. ಹೋರಾಟದ ಉತ್ಸಾಹಕ್ಕೆ ಬಿಳಿಯ ಕೂದಲು ಬಂದಿಲ್ಲದ ಈ ರಮೇಶ್ ಮದುವೆಯ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ. ಆದರೂ ಒಮ್ಮೊಮ್ಮೆ ಲವಲವಿಕೆಯ ಹುಡುಗಿಯರನ್ನು ನೋಡಿ ಹುರುಪುಗೊಳ್ಳುವುದನ್ನು ಕಂಡಾಗ ಸಂತೋಷವಾಗುತ್ತೆ.

ಎಷ್ಟೋ ವರ್ಷ ಸಮಾಜವಾದಿ ಹಾಗೂ ಜನತಾ ಪಕ್ಷದಲ್ಲಿ ಕಾವಲುಗಾರರಂತೆ ದುಡಿದ ರಮೇಶ್‌ರವರಿಗೆ ಇಂದು ಮೆತ್ತನೆಯ ಸುತ್ತುವ ಕುರ್ಚಿ (ಕರ್ನಾಟಕ ಸಣ್ಣ ಕೈಗಾರಿಕೆಗಳ ನಿಗಮದ ಅಧ್ಯಕ್ಷ ಪದವಿ) ಸಿಕ್ಕಿದೆ. ಹವಾನಿಯಂತ್ರಣದ ಕಚೇರಿ, ಕಾರು ಮಿಕ್ಕೆಲ್ಲ ಸೌಕರ್ಯಗಳು ಸಿಕ್ಕಿವೆ. ಇವೆಲ್ಲ ರಮೇಶ್‌ರವರನ್ನು ಯಾವುದೇ ಕಾರಣಕ್ಕಾಗಿ ದುರ್ಬಲಗೊಳಿಸಬಾರದು. ಅಧಿಕಾರ ಸಿಕ್ಕುವುದು 'ನಮ್ಮ ವ್ಯಕ್ತಿತ್ವವನ್ನು ಪರೀಕ್ಷಿಸುವುದಕ್ಕಾಗಿ' ಎಂಬುವನ್ನು ತಿಳಿಯಬೇಕು, ಸದಾ ಗುಡಿಕೈಗಾರಿಗಳ ಬಗ್ಗೆ ಮಾತಾಡುವ ರಮೇಶ್‌ರವರು ಇಂದು ಅವು ನಶಿಸಿ ಹೋಗುತ್ತಿರುವ ಸಂದರ್ಭ ದಲ್ಲಿ ಜೀವ ಕೊಡಬೇಕಾಗಿದೆ. ನಮ್ಮ ಸುತ್ತಲಿನ ಹೊಗೆ ಕಾರುವ ದಗಲ್‌ಬಾಜಿ ಕಾರ್ಖಾನೆಗಳಿಂದ ಈಗಾಗಲೇ ಪರಿಸರವನ್ನು ಹಾಳುಮಾಡಿಕೊಂಡಿದ್ದೇವೆ. ಪ್ರಸಕ್ತ ರಾಜಕೀಯ ವಿಷಮ ಪರಿಸ್ಥಿತಿಯಲ್ಲಿ ಏನೇನೋ ಸಾಧಿಸಿಬಿಡುತ್ತೇನೆ ಎಂದು ಹೊರಡದೆ ತನ್ನ ಕಾಲದಲ್ಲಿ ಸ್ಮಾರಕವಾಗಿ ಉಳಿಯುವ ಒಂದಷ್ಟನ್ನು ಮಾಡಲಿ ಎಂದು ಆಶಿಸುವೆ. ಒಬ್ಬ ವ್ಯಕ್ತಿ ಒಂದು ಪುಟ್ಟ ಒಳ್ಳೆಯ ಕೆಲಸ ಮಾಡಿದರೂ ನಮ್ಮ ಜನ ಎತ್ತಿ ಕುಣಿದಾಡುತ್ತಾರೆ ಎಂಬುದನ್ನು ಮರೆಯದಿರಲಿ ಎಂಬುದನ್ನು ನನ್ನಂಥ ನೂರಾರು ಗೆಳೆಯರು ರಮೇಶ್‌ರವರಿಂದ ಬಯಸ್ತಾರೆ.

31-1-86 ಶೂದ್ರ ಶ್ರೀನಿವಾಸ್

## ಸುದ್ದಿಯ ಗುದ್ದಾಟ

### ವೀರಣ್ಣ ಎಂಬ ಮಾರ್ಕ್ಸ್‌ವಾದಿ

ಸ್ವಾತಂತ್ರ್ಯೋತ್ತರ ಭಾರತವಲ್ಲಿ ಗಾಂಧಿಯನ್ನು ಸಾಯಿಸಿದಷ್ಟು ಮತ್ಯಾರನ್ನು ಸಾಯಿಸಿಲ್ಲ ಎಂದುಕೊಳ್ಳುವಾಗಲೆಲ್ಲ ಮಾರ್ಕ್ಸ್‌ನನ್ನು ಅಷ್ಟೇ ಪ್ರಮಾಣದಲ್ಲಿ ಸಾಯಿಸಿದ್ದಾರೆ. ಹೀಗೆ ಸಾಯಿಸುತ್ತಲೇ ದುಡ್ಡು ಮಾಡಿಕೊಳ್ಳುವ ಒಂದು ತಂತ್ರವೂ ಆಗಿರುತ್ತದೆ. ಈ ದೃಷ್ಟಿಯಿಂದ ಮುಖವಾಡ ಹಾಕಿಕೊಳ್ಳುವುದು ತುಂಬ ಸುಲಭ.

ಬೆಂಗಳೂರಿನಲ್ಲಿ ಸಾಹಿತ್ಯದ ಯಾವ ವಿದ್ಯಾರ್ಥಿಯನ್ನೇ ವೀರಣ್ಣನವರ ಬಗ್ಗೆ ಕೇಳಿದರೆ "ಅಯ್ಯೋ ಬಿಡಿ ಸಾರ್, ಅವರು ಎಲ್ಲಿ ಹಣವಿರುತ್ತೋ ಅಲ್ಲಿ ಇರ್‍ತಾರೆ" ಎನ್ನುವರು. ಈಗ ಈ ಮನುಷ್ಯ ನವಕರ್ನಾಟಕ ಸಂಸ್ಥೆಗೆ "ಕನ್ನಡ ಸಾಹಿತ್ಯ-ಚಾರಿತ್ರಿಕ ಬೆಳವಣಿಗೆ" ಐದು ಸಂಪುಟಗಳಲ್ಲಿ ತರಲು ಹೋಗಿದ್ದಾರೆ. ಇಲ್ಲಿಯವರೆವಿಗೆ ನಿರಂಜನ ಮುಂತಾದವರು ಮಾಡಿರುವ ಅಮೂಲ್ಯ ಕೆಲಸದ ಮೇಲೆ ಗೋರಿ ನಿರ್ಮಾಣಮಾಡಲು ಹೊರಟಿರುವ 'ರಾಜಾರಾಮ್' ಎಂಬ ವ್ಯಕ್ತಿಗೆ 'ಸಾಹಿತ್ಯ ಮತ್ತು ಸಂಸ್ಕೃತಿ' ಯ ಮೊದಲನೆಯ ಪಾಠವೂ ಗೊತ್ತಾಗುವುದಿಲ್ಲ. ಕಮ್ಯೂನಿಸ್ಟ್ ಎಂದರೆ ಮುಗಿಯಿತು ರಾಜಾರಾಮ್‌ರವರಿಗೆ. ಇಂಥ 'ಕಮ್ಯುನಿಸ್ಟ್' ಬೆಣ್ಣೆಯ ಮಾತುಗಳಿಂದ ಮರುಳು ಗೊಳಿಸಿದ ವೀರಣ್ಣ ದೊಡ್ಡ ಸಾಹಿತ್ಯದ ಇತಿಹಾಸಕಾರರಾಗಿದ್ದಾರೆ. ಮೊದಲನೆಯ ಸಂಪುಟದ ದೋಷಗಳನ್ನು ಸಾಹಿತ್ಯದ ವಿದ್ಯಾರ್ಥಿಗಳು ಬೀದಿಬೀದಿಗಳಲ್ಲಿ ಹಾಡಿ ನಗುತ್ತಿದ್ದಾರೆ. ಆದರೆ ಹಾ. ಮ. ನಾಯಕರಂಥ ಬುದ್ಧಿವಂತರು ಇದನ್ನು ಹೊಗಳಲು ತೊಡಗಿದ್ದಾರೆ. ಅವರು ವಿಶ್ವಕನ್ನಡ ಸಮ್ಮೇಳನದ ಬಗ್ಗೆ ಅಷ್ಟು ಚೆನ್ನಾಗಿ ಬರೆದವರಿಗೆ ಈ ಪುಸ್ತಕ ಯಾಕೆ ಅರ್ಥವಾಗಲಿಲ್ಲ? ಅದೇನೆ ಇರಲಿ, ನನ್ನ ನೋವೆಂದರೆ; ನಮ್ಮ ಸಾಹಿತಿಗಳು ಈ ಗ್ರಂಥದಲ್ಲಿ ಮುಖ-ಮೂತಿ ಕಳಕೊಂಡು ನರಳ್ತಾ ಇದ್ದಾರೋ ಎಂದು. ಮತ್ತೊಂದು ಭಯವೆಂದರೆ ಇದು ಬೇರೆ ಭಾಷೆಗಳಿಗೆ ಅನುವಾದವಾಗ್ತದಂತೆ. ಇಷ್ಟೆಲ್ಲ ಅನ್ಯಾಯ ಆಗುವಾಗ ಡಾ॥ ಜಿ. ರಾಮಕೃಷ್ಣ ಮತ್ತು ಎಸ್. ಆರ್. ಭಟ್‌ರವರಂಥ ಪ್ರಜ್ಞಾವಂತರು ಯಾಕೆ ಮೌನಿಗಳಾಗಿದ್ದಾರೋ ಗೊತ್ತಿಲ್ಲ. ಅಥವಾ ಅವರಿಗೂ ರಾಜಾರಾಮ್‌ರವರ ಮೇಲೆ ಹಿಡಿತವಿಲ್ಲವೇನೋ,

# ಮಗುವಿನ ಉತ್ತಮ ಪಾಲನೆಗಾಗಿ

ನಿಮ್ಮ ಮಗು ಅಪೇಕ್ಷಿಸಿದಷ್ಟು ಕಾಲ ಎದೆ ಹಾಲು ಕುಡಿಸಿ.

ನಿಮ್ಮ ಮಗುವಿಗೆ ನಾಲ್ಕು ತಿಂಗಳಾದ ನಂತರ ಮೆದು ಆಹಾರ ಪ್ರಾರಂಭಿಸಿ.

ನಿಮ್ಮ ಮಗುವಿಗೆ ದಿನಕ್ಕೆ 5-6 ಬಾರಿ ಆಹಾರ ಕೊಡಿ.

ನಿಮ್ಮ ಮಗುವಿಗೆ ಖಾಯಿಲೆ ಇದ್ದಾಗಲೂ ಆಹಾರ ನಿಲ್ಲಿಸಬಾರದು.

ನಿಮ್ಮ ಮಗು ಅನಾರೋಗ್ಯದಿಂದ ನರಳುತ್ತಿರುವಾಗ ಅದರಲ್ಲೂ ಅತಿಸಾರ ಭೇದಿಯಿದ್ದಾಗ ಹೆಚ್ಚು ನೀರು ಕುಡಿಸಿರಿ.

ನಿಮ್ಮ ಮಗು ರೋಗದಿಂದ ಬಳಲುತ್ತಿದ್ದರೆ ಕೂಡಲೇ ಹತ್ತಿರ ಇರುವ ಆರೋಗ್ಯ ಕೇಂದ್ರದ ಸಹಾಯ ಪಡೆಯಿರಿ.

ನಿಮ್ಮ ಮಗುವಿಗೆ ಸಕಾಲದಲ್ಲಿ ಅಗತ್ಯವಾದ ರೋಗನಿರೋಧಕ ಚುಚ್ಚು ಮದ್ದುಗಳನ್ನು ಹಾಕಿಸಿ.

ನಿಮ್ಮ ಮಗುವಿನ ಆಹಾರವನ್ನು ನೊಣಗಳಿಂದ ರಕ್ಷಿಸಿ.

ನಿಮ್ಮ ಮಗುವಿಗೆ ಉಣಿಸುವ ಮೊದಲು ನಿಮ್ಮ ಹಾಗೂ ಮಗುವಿನ ಕೈಗಳನ್ನು ಸ್ವಚ್ಛವಾಗಿರಿಸಿರಿ.

ಹೆಚ್ಚಿನ ವಿವರಗಳಿಗೆ : ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ,
ಕರ್ನಾಟಕ ಸರ್ಕಾರ, ಬೆಂಗಳೂರು.
ಇವರನ್ನು ಸಂಪರ್ಕಿಸಿರಿ.

"ಕರ್ನಾಟಕ ವಾರ್ತೆ"

F/NP/UKRN/72 No. M (2) PRB 210/73/74

Shoodra Kannada Monthly

ಮಾರ್ಚ್ 1986ರ ಸಂಚಿಕೆಯಲ್ಲಿ :

ಬರಗೂರು ರಾಮಚಂದ್ರಪ್ಪ—ಪ್ರಸನ್ನ—ಕೆ. ವಿ. ತಿರುಮಲೇಶ್—ಸುಂದರರಾಜ್—ಜಯಂತ ಕಾಯ್ಕಿಣಿ—ಸ್ವಾಮಿನಾಥ್—ಜಗದೀಶ್—ವರದಾ ಶ್ರೀನಿವಾಸ್—ಸಿದ್ಧರಾಮಯ್ಯ—ಸುವರ್ಣ ಕಾಡನ ಕುಪ್ಪೆ—ನಾಗರತ್ನ ಕುಮಾರಿ—ಮಮತಾ ಸಾಗರ್—ತಿರುಗಾಟದ ನಾಟಕಗಳು : ಕ. ವೆಂ. ರಾಜಗೋಪಾಲ್—ಸೂರಿಯವರ ಫಾದರ್—ಸಿದ್ಧಾರ್ಥ—ಕನಸಿಗೊಂದು ಕಣ್ಣು.



Printed at : Shalivahan Printers, Bangalore - 53
Editor & Publisher : M. SRINIVAS